# ಸಿದ್ಧಗಂಗಾ



ಬೆಂಗಳೂರು ಜಿಲ್ಲೆ, ಮಾಗಡಿ ತಾ|| ಬ್ಯಾಲಕೆರೆ ಗ್ರಾಮದಲ್ಲಿ ಇತ್ತೀಚೆಗೆ ಭಕ್ತಿ ಭಂಡಾರಿ
ಶ್ರೀ ಬಸವೇಶ್ವರರ ಜಯಂತಿಯನ್ನು ಆಚರಿಸಲಾಯಿತು. ಆ ಸಂದರ್ಭದಲ್ಲಿ
ಅಧಿಕ ಸಂಖ್ಯೆಯಲ್ಲಿ ನೆರೆದಿದ್ದ ಭಕ್ತಮಹಾಶಯರು ಮತ್ತು ಅಭಿ
ಮಾನಿಗಳು ಪರಮಪೂಜ್ಯ ಶ್ರೀ ಶ್ರೀಗಳವರನ್ನು ಸ್ವಾಗತಿಸಿ,
ಸಕಲ ಮರ್ಯಾದೆಗಳೊಡನೆ ಮೆರವಣಿಗೆಯಲ್ಲಿ
ಕರೆದೊಯ್ಯುತ್ತಿರುವುದು.

ಜೂನ್, 1979

## 'ಸಿದ್ಧಗಂಗಾ' ಚಿರಾಯುವಾಗಲೆಂದು

### ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗಕ್ಕೆ ಕೃತಜ್ಞತೆಗಳು.

625 ಶ್ರೀ ಎನ್. ಶಿವಣ್ಣ
ಪ್ರೊ|| ಮಲ್ಲಿಕಾರ್ಜುನ ಬಸ್‌ಸರ್ವೀಸ್
ಟಿ. ನರಸೀಪುರ, ಮೈಸೂರು ಜಿಲ್ಲೆ

626 ಪಟೇಲ್ ಶ್ರೀ ರಾಜಪ್ಪ
ಪ್ರೊ|| ಮಹದೇಶ್ವರ ರೈಸ್‌ಮಿಲ್
ಲಾನನ್ ದೇವನಹಳ್ಳಿ,
ಕೆ. ಆರ್. ನಗರ ತಾ||, ಮೈಸೂರು ಜಿಲ್ಲೆ

627 ಶ್ರೀ ಬಿ. ನಂಜಪ್ಪ, ವಕೀಲರು
ಅಶೋಕ ನಗರ, ಮಂಡ್ಯ

628 ಶ್ರೀ ಬಿ. ಬ್ರಹ್ಮಲಿಂಗಪ್ಪ ಬಿ. ಇ.,
ಮುನಿಸಿಪಲ್ ಎಕ್ಸ್‌ಕ್ಯುಟಿವ್
ಇಂಜಿನಿಯರ್
ಲಕ್ಷ್ಮೀಪುರ, ಮೈಸೂರು-4

629 ಶ್ರೀ ಎಸ್. ಡಿ. ಶಿವರುದ್ರಪ್ಪ
ಹೆಗವಾಡಿಪುರ, ಚಾಮರಾಜನಗರ ತಾ||
ಮೈಸೂರು ಜಿಲ್ಲೆ.

630 ಶ್ರೀ ಪಿ. ಸಿ. ಮಲ್ಲಿಕಾರ್ಜುನಪ್ಪ
ಹಳ್ಳದಕೇರಿ, ಮೈಸೂರು-1

631 ಶ್ರೀಮತಿ ಎನ್. ಜಯಮ್ಮ
ಹಳ್ಳದಕೇರಿ, ಮೈಸೂರು-1

632 ಶ್ರೀ ಪಿ. ಹೆಚ್. ಗೋವಿಂದರಾವ್
ಅಂಡ್‌ಸನ್ಸ್,
ಫ್ಯಾಮಿಲಿ ಡ್ರಸ್ ಮೇಕರ್ಸ್
ವಿ. ವಿ. ಪುರ, ಮೈಸೂರು-2

633 ಶ್ರೀ ಎಸ್. ಎನ್. ಸಿದ್ದಪ್ಪ
ಸೋಲೂರು, ಮಾಗಡಿ ತಾ||
ಬೆಂಗಳೂರು ಜಿಲ್ಲೆ.

634 ಶ್ರೀ ಎಂ. ಬಸಪ್ಪ,
ರಾಮಚಂದ್ರ ಅಗ್ರಹಾರ
ಮೈಸೂರು-4

635 ಶ್ರೀ ಬಿ. ಜಿ. ಗಂಗಾಧರಪ್ಪ, ಶಿಕ್ಷಕರು
ಬಿಡದಿ, ರಾಮನಗರ ತಾ||
ಬೆಂಗಳೂರು ಜಿಲ್ಲೆ

636 ಶ್ರೀಕಂಠಪ್ಪ, ಮರ್ಚೆಂಟ್
ಇಲವಾಲ, ಮೈಸೂರು-5

637 ಶ್ರೀ ಎಂ. ಬಿ. ಬೋರೇಗೌಡ
ಮೆಲ್ಲಹಳ್ಳಿ, ಮೈಸೂರು ತಾ||

638 ಶ್ರೀ ಎಲ್. ಚನ್ನಪ್ಪ,
ಜಯಲಕ್ಷ್ಮಿಪುರ, ಮೈಸೂರು-12

639 ಶ್ರೀ ಎಂ. ಪರಮಮೂರ್ತಿ
ಜಯಲಕ್ಷ್ಮಿಪುರ, ಮೈಸೂರು-12

640 ಶ್ರೀ ಡಿ. ಸಿದ್ಧಲಿಂಗಪ್ಪ
ಚಂದಗಾಡ್, ಕೊಲ್ಲಾಪುರ್
ಮಹಾರಾಷ್ಟ್ರ

641 ಶ್ರೀ ಸಿ. ಎಂ. ಎಸ್. ಶಾಸ್ತ್ರಿ
ಮಾಜಿವಿಧಾನ ಸಭಾಸದಸ್ಯರು
ಚಿಕ್ಕಮಗಳೂರು.

642 ಶ್ರೀ ಸಿ. ಬಿ. ಹಾಲಪ್ಪ
ಕೋಟೆ, ಚಿಕ್ಕಮಗಳೂರು.

(ಮುಂದುವರಿಯುತ್ತದೆ)



## ಶ್ರೀವಾಣಿ

ಹಿಂದೆ ಭರತಖಂಡದ ಬದುಕು ಬಹು ಸುಂದರವಾಗಿತ್ತು; ಪರಿಪೂರ್ಣವಾಗಿತ್ತು. ಯಾವ ನಮ್ಮ ಗ್ರಾಮಾಂತರ ಜನ ತುಂಬು ಬದುಕನ್ನು ಸಾಗಿಸುತ್ತಿದ್ದರೋ, ಯಾವ ಹಳ್ಳಿಗಳು ಭರತಖಂಡದ ಸಂಸ್ಕೃತಿಯನ್ನು ಉಳಿಸಿ ಕೊಂಡು ಬೆಳಸಿ ಕೊಂಡುಬರುವುದರಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸಿದ್ದುವೋ, ಅಂಥಹಳ್ಳಿಗಳಿಗೆ ಇಂದು ಯಾವ ದುರದೃಷ್ಟವೋ ಏನೋ ನಗರದ ಅತಿನಾಗರೀಕತೆಯ ಕೆಟ್ಟಸೋಂಕು ತಗುಲಿ ಅವುಗಳ ಬದುಕುಹದಗೆಟ್ಟಿದೆ; ಕೃತಕವಾಗಿದೆ. ಹಿಂದೆ ನಮ್ಮ ಹಳ್ಳಿಯ ಜನ ಜಾತಿಮತ ಭೇದವಿಲ್ಲದೆ ಮಧುರ ಬಾಂಧವ್ಯದಿಂದ ಒಟ್ಟಾಗಿಕಲೆತು ಸುಗ್ಗಿಯ ಸಮಯದಲ್ಲಿ ಆಚರಿಸುತ್ತಿದ್ದ ಕುಣಿತ, ಕೋಲಾಟ, ಜನಪದನೃತ್ಯ, ನಾಟಕಾಭಿನಯ, ದೇವರಉತ್ಸವ, ಮಹಾತ್ಮರ ಜಯಂತ್ಯಾಚರಣೆ-ಮುಂತಾದ ಸಾಂಪ್ರದಾಯಿಕ ಕಾರ್ಯಕ್ರಮಗಳು ಕಣ್ಮರೆಯಾಗುತ್ತಿವೆ. ಅವುಗಳಿಗೆ ಬದಲಾಗಿ ಎಲ್ಲೆಲ್ಲೂ ಆಡಂಬರದಗದ್ದಲದ ಸಮಾರಂಭಗಳು ಜರುಗುತ್ತಿವೆ ಇಂದು ಪ್ರತಿಯೊಬ್ಬನೂ ಸಾಮಾನ್ಯ ಸುಖದ ಪ್ರಾಪ್ತಿಗಾಗಿ ತೊಳಲಾಡುತ್ತಿದ್ದಾನೆ. ಬಾಹ್ಯ ವಸ್ತುಗಳನ್ನು ಭೋಗಿಸುವುದರಿಂದ ಬರುವ ತಾತ್ಕಾಲಿಕ ಸುಖವನ್ನು ಪರಮಸುಖವೆಂದುನಂಬಿ ಭೋಗಲಾಲಸೆಯಲ್ಲಿ ಮಗ್ನನಾಗಿ, ತನ್ನ ಬಾಳನ್ನು ಹಾಳುಮಾಡಿಕೊಳ್ಳುತ್ತಿದ್ದಾನೆ. ಐಂದ್ರಿಯಿಕ ಕಲ್ಪನಾ ಸಾಮ್ರಾಜ್ಯದಲ್ಲಿ ವಿಹರಿಸುತ್ತಿರುವ ಅವನು ಕ್ಷಣಭಂಗುರಂಗಳು ಆಪಾತರಮಣೀಯಗಳು, ಪರಿಣಾಮವಿರಸಗಳೂ ಆದ ಸುಖಗಳನ್ನು ನಂಬಿ ಭ್ರಾಂತನಾಗಿ ಕಡೆಗೆ ಅನಂತ ದುಃಖಗಳನ್ನು ಅನುಭವಿಸುತ್ತಿದ್ದಾನೆ. ಈ ತಪ್ಪು ಕಲ್ಪನೆಯ ವಿಷಮದೃಷ್ಟಿಮಾಯವಾಗಿ ಜಗದುದ್ಧಾರವಾಗ ಬೇಕಾದರೆ, ಮಹಾನುಭಾವರು ಸಾರಿ ಹೋಗಿರುವ ದಿವ್ಯ ಸಂದೇಶಗಳನ್ನು ಅರಿತು ಆಚರಿಸುವ ದೃಢ ಪ್ರಯತ್ನ ಮಾಡಿದಾಗ ಮಾತ್ರಸಾಧ್ಯ. ಅದಕ್ಕಾಗಿ ನಮ್ಮ ಹಳ್ಳಿಯ ಬಂಧುಗಳು ಸಂಘಟಿತರಾಗಿ ಮೇಲಿಂದ ಮೇಲೆ ಅವರ ಜಯಂತ್ಯುತ್ಸವಾದಿಗಳನ್ನು ಏರ್ಪಡಿಸುವುದು ಸೂಕ್ತ.

# 'ಸಿದ್ಧಗಂಗಾ'

ಜೂನ್, ೧೯೭೯

ಸಂಪುಟ-೧೫ ಸಂಚಿಕೆ-೬

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಸಂಘದ ಪರವಾಗಿ

ಸಂಪಾದಕ ಮಂಡಲಿ
ಪಂ|| ಚನ್ನಪ್ಪ ಎರೇಸೀಮೆ
ಸಿ. ಎನ್. ಚಂದ್ರಶೇಖರಯ್ಯ
ವಿರೂಪಾಕ್ಷಯ್ಯ
ಬಸವರಾಜು

ಜಾಹಿರಾತು ವ್ಯವಸ್ಥಾಪಕರು
ಎಂ. ರೇಣುಕಾರಾಧ್ಯ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ
ಅಜೀವ ಸದಸ್ಯತ್ವ: **151-00** ರೂ
ವಾರ್ಷಿಕ ಚಂದಾ: **10-00** ರೂ


## ಈ ಸಂಚಿಕೆಯಲ್ಲಿ



### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು, ಸಣ್ಣಕಥೆ, ಕವನ, ನಗೇಹನಿ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು, ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

"ಸಂಪಾದಕರು"

"ಸಿದ್ಧಗಂಗಾ" [ಕನ್ನಡ ಮಾಸ ಪತ್ರಿಕೆ]
ಶ್ರೀ ಸಿದ್ಧಗಂಗಾ ಕ್ಷೇತ್ರ–572131 ತುಮಕೂರು ಜಿಲ್ಲೆ.
ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

### ಚಂದಾದಾರರಲ್ಲಿ ವಿನಂತಿ

1979ನೆಯ ಹೊಸ ವರ್ಷದ ನಿಮ್ಮ ಚಂದಾ ನಂಬರ್ ಗುರುತಿಸಿಕೊಳ್ಳಿ. ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವಹರಿಸುವಾಗ ನಿಮ್ಮ ವಿಳಾಸದ ಹಿಂಬದಿ ಇರುವ ಚಂದಾ ನಂಬರ್ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿಸಿ ವ್ಯವಹರಿಸಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ಮುಂದಿನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ಪ್ರಾರ್ಥನೆ.

ಪ್ರಕಾಶಕರು
'ಸಿದ್ಧಗಂಗಾ' ಮಾಸ ಪತ್ರಿಕೆ, ಸಿದ್ಧಗಂಗಾ ಮಠ–572131 ತುಮಕೂರು ಜಿಲ್ಲೆ.

# ಸಂಪಾದಕೀಯ

ಶ್ರೀ ಸಿದ್ಧಗಂಗಾಕ್ಷೇತ್ರಾಧ್ಯಕ್ಷರಾದ ಶ್ರೀ ಶಿವಕುಮಾರಮಹಾಸ್ವಾಮಿಗಳವರು ಗ್ರಾಮಾಂತರ ಪ್ರದೇಶದ ಜನಜೀವನದ ಸರ್ವತೋಮುಖ ಪ್ರಗತಿಯ ವಿಷಯದಲ್ಲಿ ಅಪಾರ ಶ್ರದ್ಧಾಸಕ್ತಿಯನ್ನು ತಾಳಿದವರು. ಧಾರ್ಮಿಕವಾಗಿ ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ ಗ್ರಾಮಾಂತರ ಪ್ರದೇಶದ ಪ್ರಗತಿಯಾಗದಿದ್ದರೆ ಎಲ್ಲ ಯೋಜನೆಗಳೂ ವ್ಯರ್ಥ, ಎನ್ನುತ್ತಾರೆ. ಆದ್ದರಿಂದ ರಾಷ್ಟ್ರದಲ್ಲಿ ರಚನಾತ್ಮಕ ಕಾರ್ಯಕ್ರಮಗಳನ್ನು ಹಾಕಿಕೊಂಡು ಯತ್ಕಿಂಚಿತ್ ಪ್ರಗತಿಯನ್ನು ಸಾಧಿಸಬೇಕೆನ್ನುವವರು ಗ್ರಾಮೀಣ ಜನಾಂಗವನ್ನು ಪ್ರಗತಿಪಥದತ್ತ ಕೊಂಡೊಯ್ಯುವ ಯೋಜನಾಲಬ್ಧವಾದ ಕಾರ್ಯ ಚಟುವಟಿಕೆಗಳು ಬಹುದೊಡ್ಡ ಪ್ರಮಾಣದಲ್ಲಿ ನಡೆಯಬೇಕಾದುದು ಅನಿವಾರ್ಯವೆನ್ನುತ್ತಾರೆ. ಸಾಮಾಜಿಕಕಾರ್ಯಕರ್ತರು ಸರಕಾರದವರು ಈ ದಿಸೆಯಲ್ಲಿ ಏನೇಮಾಡಿಕೊಳ್ಳಲಿ ಶ್ರೀಗಳವರು ಮಾತ್ರ ತಮ್ಮ ಪಾಲಿನ ಗ್ರಾಮಾಂತರ ಜನಜೀವನದ ಪ್ರಗತಿಯ ವಿಷಯದಲಿ ಅಪಾರ ವಾತ್ಸಲ್ಯಭಾವದಿಂದ ಸತತ ಪ್ರಯತ್ನಿಸುತ್ತಿದ್ದಾರೆ. ಅವರು ಏರ್ಪಡಿಸುವ ಸಭೆಸಮಾರಂಭಗಳಿಗೆ ದಯಮಾಡಿಸಿ ಅವರಿಗೆ ಸೂಕ್ತವಾದ ತಿಳುವಳಿಕೆಗಳನ್ನು ನೀಡಿ ಅವರಮಧ್ಯದಲ್ಲಿ ಕಾಲಕಳೆದು ಬರುತ್ತಿದ್ದಾರೆ. ಅನೇಕವಿದ್ವಾಂಸರನ್ನು ಕಲಾನಿಪುಣರನ್ನು ಕಲೆಹಾಕಿಕೊಂಡು ಅವರಿಂದ ಉಪನ್ಯಾಸ, ಪ್ರವಚನ, ಮನರಂಜನಾ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಾರೆ. ಎಂದಿನಿಂದಲೂ ಶ್ರೀಕ್ಷೇತ್ರದ ಇಂಥಚಟುವಟಿಕೆಗಳು ಗ್ರಾಮಾಂತರಪ್ರದೇಶದಲ್ಲಿ ಸಾರಿಬಂದಿವೆ. ಈವರ್ಷ ಈದಿಸೆಯಲ್ಲಿ ಹೊಸದೊಂದು ಯೋಜನೆಯನ್ನು ಕಾರ್ಯರೂಪಕ್ಕೆ ತಂದು ಅದನ್ನು ಯಶಸ್ವಿಗೊಳಿಸಲು ಪ್ರಯತ್ನಿಸುತ್ತಿದ್ದಾರೆ. ಬಸವಜಯಂತಿಯಕಾರ್ಯಕ್ರಮ. ಒಂದು ಗ್ರಾಮದಲ್ಲಿ ಬೆಳಗಿನ 8-30 ರಿಂದ 12–30 ರವರೆಗೆ ಮಧ್ಯಾಹ್ನ 3–30 ರಿಂದ 6–30 ರವರೆಗೆ ಸಭಾಕಾರ್ಯಕ್ರಮಗಳು ಅದರಲ್ಲಿ ವಿದ್ವಾಂಸರ ಭಾಷಣಗಳು. ಕೀರ್ತನೆಗಳು ಪ್ರವಚನಗಳು ನಡೆಯಬೇಕು. ರಾತ್ರಿ 10 ಘಂಟೆಯಿಂದ ಮಠದಲ್ಲಿಯೇ ರೂಪುಗೊಂಡ ಸಂಗೀತನಾಟಕ ಮಂಡಳಿಯವರಿಂದ ನಾಟಕ ಮಾಡಿಸಬೇಕು. ಈ ಕಾರ್ಯಕ್ರಮದಲ್ಲಿ ಆಗ್ರಾಮದ ಸುತ್ತಮುತ್ತಣ ಹತ್ತಿಪ್ಪತ್ತು ಗ್ರಾಮಗಳು ಭಾಗವಹಿಸಬೇಕು. ಬಂದವರಿಗೆಲ್ಲ ಪ್ರಸಾದವಿತರಣೆ ಆಗ್ರಾಮದವರಿಂದ ನಡೆಯಬೇಕು. ಪ್ರತಿವರ್ಷವೂ ಈ ಕ್ರಮದಲ್ಲಿ ಕಾರ್ಯಕ್ರಮಗಳು ನಡೆಯಬೇಕು. ಎಂಬುದೇ ಈ ವರ್ಷದ ಹೊಸಯೋಜನೆ. ಈ ಯೋಜನೆಯಂತೆ ಮೇ ತಿಂಗಳ 15 ನೆಯ ತಾರೀಖು ಮಾಗಡಿತಾಲ್ಲೂಕು ಬ್ಯಾಲಕೆರೆ, 19 ನೆಯ ತಾರೀಖು ಮಾಗಡಿತಾಲ್ಲೂಕು ಕಂಚುಕಲ್ಲು ಬಂಡೆಮಠ, 24 ನೆಯ ತಾರೀಖು ತುಮಕೂರು ತಾಲ್ಲೂಕು ಮೆಳೆಹಳ್ಳಿಗಳಲ್ಲಿ ಅತ್ಯಂತ ವಿಜೃಂಭಣೆಯಿಂದ ಬಸವಜಯಂತಿ ಕಾರ್ಯಕ್ರಮ ಜರುಗಿತು. ಶ್ರೀ ಕ್ಷೇತ್ರದ ಕಲಾವಿದರು, ವಿದ್ವಾಂಸರು, ಸಾಮಾಜಿಕಕಾರ್ಯಕರ್ತರು ಶ್ರದ್ಧಾಸಕ್ತಿಗಳಿಂದ ಈ ಕಾರ್ಯಕ್ರಮದಲ್ಲಿ ಭಾಗವಹಿಸಿ ಶ್ರೀ ಶ್ರೀಗಳವರ ಯೋಚನೆ ಯೋಜನೆಗಳನ್ನು ಅರ್ಥಪೂರ್ಣಗೊಳಿಸಿದರು. ಸ್ವತಃಶ್ರೀಗಳ

ವರು ಈ ಕಾರ್ಯಕ್ರಮಗಳಲ್ಲಿ ಯಾವ ಶ್ರಮವನ್ನೂ ಲೆಕ್ಕಿಸದೆ ಭಾಗವಹಿಸಿದುದು ಎಲ್ಲರನ್ನೂ ಆಶ್ಚರ್ಯ ಚಕಿತಗೊಳಿಸಿತು. ಬೆಳಗಿನ ಮೂರುಘಂಟೆಯಲ್ಲಿ ಶ್ರೀಗಳವರು ಮಠದಲ್ಲಿ ಶಿವಪೂಜೆಮುಗಿಸಿದೊಡನೆಯೆ ಆಯಾಯ ಹಳ್ಳಿಗೆದಯಮಾಡಿಸು ವುದು, ಅಲ್ಲಿ ಸಭೆಯಲ್ಲಿ 8-30 ರಿಂದ 12–30 ರವರೆಗೆ ಭಾಗವಹಿಸುವುದು ಸಭೆಮುಗಿದಮೇಲೆ ಪುನಃಶಿವಪೂಜೆ, ಮುಗಿದೊಡನೆ ಪುನಃ ಸಭೆಕಾರ್ಯಕ್ರಮಗಳಲ್ಲಿ 3–30 ರಿಂದ 6–30 ಅಥವಾ 7 ಘಂಟೆಯವರೆಗೆ ಭಾಗಿಗಳಾಗುವುದು. ಈ ಸಭೆಮುಗಿದೊಡನೆ ಪುನಃ ಶಿವಪೂಜೆ, ಶಿವಪೂಜೆಮುಗಿದೊಡನೆ ಪುನಃ ಜಗಜ್ಯೋತಿಬಸವೇಶ್ವರ ನಾಟಕ ಕಾರ್ಯಕ್ರಮ ದಲ್ಲಿ ಬೆಳಗಿನ 4 ಘಂಟೆಯವರೆಗೆ. 4 ಘಂಟೆಯನಂತರ ಮಠಕ್ಕೆ ದಯಮಾಡಿಸಿ ಪುನಃಮಠದಲ್ಲಿ ಪೂಜೆ. ಹೀಗೆ ವಿರಾಮವಿಲ್ಲದೆ ಕಾರ್ಯಕ್ರಮಗಳಲ್ಲೆಲ್ಲ ಭಾಗವಹಿಸಿ ಕಾರ್ಯಕ್ರಮಗಳನ್ನು ಯಶಸ್ವಿಗೊಳಿಸುವಲ್ಲಿನ ಅವರ ಅಪಾರ ಶ್ರದ್ಧಾ ಸಕ್ತಿಗಳು ಎಲ್ಲರನ್ನು ನಾಚಿಸುವಂಥವುಗಳು. ಉತ್ತರ ವಯಸ್ಸಿನಲ್ಲಿ ವಿರಾಮ ವಿಲ್ಲದೆ ಕಾರ್ಯಕ್ರಮಗಳಲ್ಲಿ ತಮನ್ನು ತೊಡ ಗಿಸಿಕೊಳ್ಳುವುದರ ಹಿನ್ನೆಲೆಯಲ್ಲಿ ಅವರ ಲೋಕಾನುಗ್ರಹಚರ್ಯೆ ಸುಸ್ಪಷ್ಟ. ಹೀಗೆ ಬಿಡುವಿಲ್ಲದ ಕೆಲಸಕಾರ್ಯಗಳಲ್ಲಿ ಉಂಟಾಗುವ ದೈಹಿಕ ಶ್ರಮವನ್ನು ತಡೆದುಕೊಳ್ಳುವ ಶಕ್ತಿ ಶ್ರೀಗಳರಿಗೆ ಹೇಗುಂಟಾಯಿತು ? ಎಲ್ಲರಿಗೂ ಇದು ಬಿಡಿಸ ಲಾರದಕಗ್ಗಂಟು. ಅವರ ಈಚರ್ಯೆಯೋ ಲೋಕಕ್ಕೆ ಉಪದೇಶವಾಗುತ್ತದೆ. ಇದನ್ನೇ ವರ್ತನೋಪದೇಶವೆನ್ನುವುದು. ಸದಾ ಶಾಂತಚಿತ್ತ, ಮಾನಸಿಕ ಪ್ರಸನ್ನತೆ, ಶಿವಲಿಂಗನಿಷ್ಠಾಗರಿಷ್ಠತೆ, ಪ್ರಸಾದಸ್ವೀಕಾರದಲ್ಲಿ ಪೂರ್ಣ ಶಾಸ್ತ್ರಗಾಮಿತ್ವ— ಇವೇ ಮೊದಲಾದ ಅವರ ಲೋಕೋತ್ತರ ನಡೆನುಡಿಗಳು ಶ್ರೀಗಳವರಿಗೆ ಈ ಶಕ್ತಿಯನ್ನು ತಂದುಕೊಟ್ಟಿವೆ. ತಮ್ಮ ೫೦ ವರ್ಷಗಳ ಶ್ರೀ ಕ್ಷೇತ್ರಾಧಿಪತ್ಯದ ಅವಧಿಯುದ್ದಕ್ಕೂ ಈ ರೀತಿಯಲ್ಲಿ ಸಮಸ್ತ ಕಾರ್ಯಕ್ರಮಗಳೂ ಶಿವನ ಪೂಜೆಯೆಂದು ಆಚರಿಸಿ, ತತ್ಫಲವನ್ನು ಲೋಕಜೀವನದ ಹಿತಕ್ಕೆ ಧಾರೆಯೆರೆದು ಲಕ್ಷೋಪಲಕ್ಷ ಜನರ ಬಾಳಿನ ಬೆಳಕಾಗಿದ್ದಾರೆ. ಅವರು ಕಟ್ಟಿದ ಬೆಳೆಸಿದ ಅನೇಕ ವಿದ್ಯಾಸಂಸ್ಥೆಗಳು ಲೋಕಜೀವನಕ್ಕೆ ಪೂರಕಗಳಾಗಿವೆ. ಹೆಮ್ಮರವಾಗಿ ಬೆಳೆದ ಆ ಸಂಸ್ಥೆಗಳ ಆಶ್ರಯದಿಂದ ಸಹಸ್ರಾರು ವಿದ್ಯಾರ್ಥಿಗಳ ಸಮಸ್ಯೆಗಳು ಪರಿಹಾರವಾಗುತ್ತವೆ. ಶ್ರೀಗಳವರ ಶ್ರಮದ ಫಲ ಸಾರ್ವಜನಿಕರಿಗೆ ವರವಾಗಿ ಪರಿಣಮಿಸಿವೆ.

ಶ್ರೀ ಶ್ರೀ (  ) ಗಳವರ ಸುವರ್ಣ ಮಹೋತ್ಸವವನ್ನು ೧೯೮೦ ನೆಯ ಇಸ್ವಿ ಏಪ್ರಿಲ್ ಅಥವಾ ಮೇ ತಿಂಗಳಲ್ಲಿ ಅತ್ಯಂತ ವಿಜೃಂಭಣೆಯಿಂದ ಜರುಗಿಸಲು ಶ್ರೀ ಕ್ಷೇತ್ರದ ಭಕ್ತವರ್ಗ ಉತ್ಸುಕವಾಗಿದೆ. ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿಗಳು ತಮ್ಮ ಅರ್ಧ ತಿಂಗಳ ವರಮಾನವನ್ನು ಈ ಮಹಾ ಕಾರ್ಯಕ್ಕೆ ಸಲ್ಲಿಸುವ ಸಂಕಲ್ಪ ಮಾಡಿದ್ದಾರೆ. ಈಗಾಗಲೇ ಅನೇಕರು ತಮ್ಮ ತಮ್ಮ ವಂತಿಕೆಗಳನ್ನು ಸಲ್ಲಿಸಿದ್ದಾರೆ. ಸಲ್ಲಿಸದೆ ಇದ್ದವರು ಬೇಗನೆ ತಮ್ಮ ಪಾಲಿನ ವಂತಿಕೆಗಳನ್ನು ಸಲ್ಲಿಸಬೇಕೆಂದು ಹಳೆಯ ವಿದ್ಯಾರ್ಥಿ ಸಂಘವು ಈ ಮೂಲಕ ವಿಜ್ಞಾಪಿಸಿಕೊಳ್ಳುತ್ತದೆ, ಮತ್ತು ಈ ಮಹಾ ಉತ್ಸವದಲ್ಲಿ ತಮ್ಮ ತನುಮನದ ಸೇವೆಯನ್ನು ಸಲ್ಲಿಸಬೇಕೆಂದೂ ವಿಜ್ಞಾಪಿಸಿಕೊಳ್ಳುತ್ತದೆ.

ಶ್ರೀಗಳವರು ಸಮಾಜ ಜೀವನಕ್ಕೆ ತಮ್ಮ ಅಮೂಲ್ಯ ಕಾಲವನ್ನೆಲ್ಲ ವಿನಿಯೋಗಿಸಿ ಅದರ ಸರ್ವಾಂಗೀಣ ಪ್ರಗತಿಗೆ ಅಹೋರಾತ್ರಿ ಶ್ರಮಿಸಿದ ಶ್ರಮದ ತೂಕಕಲ್ಲದಿದ್ದರೂ ಭಕ್ತವರ್ಗ ಯಥಾಶಕ್ತಿ ತನ್ನ ಸೇವಾ ಕೈಂಕರ್ಯವನ್ನು ಸಲ್ಲಿಸುವುದರ ಮೂಲಕ ತನ್ನನ್ನು ತಾನು ಗೌರವಿಸಿಕೊಳ್ಳಬೇಕಾಗಿದೆ. ಶ್ರೀ ಕ್ಷೇತ್ರದ ಮತ್ತು ಶ್ರೀಗಳ ಘನತೆ ಗೌರವಗಳಿಗೆ ತಕ್ಕಂತೆ ಸ್ವರ್ಣ ಮಹೋತ್ಸವ ನಡೆಯಬೇಕಾಗಿದೆ. ಆದ್ದರಿಂದ ಗುರುಲಿಂಗಜಂಗಮ ಸೇವಾಕಾಂಕ್ಷಿಗಳಾದ ಸರ್ವ ಸಮಾಜದವರೂ ಯಥಾಶಕ್ತಿ ಸ್ವರ್ಣಮಹೋತ್ಸವ ಕಾರ್ಯದ ಯಶಸ್ಸಿಗೆ ಶ್ರಮಿಸಬೇಕೆಂದು ಈ ಮೂಲಕ ವಿಜ್ಞಾಪಿಸಿಕೊಳ್ಳುತ್ತೇವೆ.

ಸಿದ್ಧಗಂಗಾ



# ನವನೀತ

(ಸಂಸ್ಕೃತ ಶ್ಲೋಕಗಳ ಭಾವಾನುವಾದ)

೧. ಅಜ್ಞಾನಾದಥವಾ ಜ್ಞಾನಾದುತ್ತಮ ಶ್ಲೋಕ ನಾಮ
ಯತ್ ।
ಸಂ ಕೀರ್ತಿತಮಘಂ ಪುಂಸೋ ದಹೇದೇಧೋ ಯಥಾ
ನಲಃ ॥

ತಿಳಿವಳಿಕೆಯಿಂದಲೋ ಅಥವಾ ತಿಳಿಯದೆಯೋ ಭಗವಂತನ ನಾಮ ಸ್ಮರಣೆಯನ್ನು ಯಾರಾದರೂ ಮಾಡಿದರೆ, ಬೆಂಕಿ ಸೌದೆಯನ್ನು ಸುಡುವಂತೆ ಅದು ಮನುಷ್ಯನ ಪಾಪವನ್ನು ನಾಶಮಾಡುತ್ತದೆ.

○ ○ ○

೨. ಏಕಃ ಪ್ರಸೂಯತೇ ಜಂತುರೇಕ ಏವ ಪ್ರಲೀಯತೇ ।
ಏಕೋಽನುಭುಂಕ್ತೆ ಸುಕೃತಮೇಕ ಏವ ಚ ದುಷ್ಕೃ
ತಮ್ ॥

ಪ್ರಾಣಿಯು ಈ ಲೋಕದಲ್ಲಿ ಏಕಾಕಿಯಾಗಿ ಹುಟ್ಟುತ್ತಾನೆ. ಒಬ್ಬನೇ ಸಾಯುತ್ತಾನೆ. ಒಬ್ಬನೇ ತಾನು ಮಾಡಿದ ಪುಣ್ಯವನ್ನು ಅನುಭವಿಸುತ್ತಾನೆ. ಹಾಗೆಯೇ ಕೆಟ್ಟದ್ದನ್ನು ತಾನು ಅನುಭವಿಸುತ್ತಾನೆ.

○ ○ ○

೩. ಅನಿತ್ಯಾನಿ ಶರೀರಾಣಿ ವಿಭವೋ ನೈವ ಶಾಶ್ವತಃ ।
ನಿತ್ಯಂ ಸಂನಿಹಿತೋ ಮೃತ್ಯುಃ ಕರ್ತವ್ಯೋ ಧರ್ಮ
ಸಂಗ್ರಹಃ ॥

ಶರೀರಗಳು ನಶ್ವರವಾದವುಗಳು, ಸಂಪತ್ತು ಸ್ಥಿರವಾದುದಲ್ಲ, ಸಾವು ಯಾವಾಗಲೂ ಸಮೀಪದಲ್ಲೇ ಇರುತ್ತದೆ. ಆದ್ದರಿಂದ ಹೆಚ್ಚು ಧರ್ಮ ಕಾರ್ಯವನ್ನು ಮಾಡಬೇಕು.

○ ○ ○

# ಅಮೃತ ಬಿಂದು

ಕೊಲುವೆನೆಂಬ ಭಾಷೆ ದೇವನದು. ಗೆಲುವೆನೆಂಬ ಭಾಷೆ ಭಕ್ತನದು- ಇದೊಂದು ಸಂತರ ನುಡಿ. ಭಗವಂತ ಭಕ್ತಾಧೀನನೆನಿಸಿಕೊಂಡರೂ ಅಡಿಗಡಿಗೆ ವಿಪುಲವಾದ ಅಡ್ಡಿ ಆತಂಕಗಳನ್ನೊಡ್ಡಿ ಪರೀಕ್ಷಿಸುತ್ತಾನೆ. 'ವಿಷಯವೆಂಬ ಹಸುರನೆನ್ನ ಮುಂದೆ ತಂದು ಪಸರಿಸದಿರಯ್ಯ'- ಎಂಬಂತೆ ನಾನಾ ವಿಷಯ ಭೋಗ ಸಾಮಗ್ರಿಗಳನ್ನು ತಂದು ನಮ್ಮ ಮುಂದೆ ಹರಡುತ್ತಾನೆ. ಸರ್ವ ಸ್ವಾತಂತ್ರ್ಯವನ್ನೂ ಕೊಟ್ಟು ಪರೀಕ್ಷಿಸುತ್ತಾನೆ. ಕಡಿದು, ಬಡಿದು, ಅರೆದು, ಕೊರೆದು, ಮುರಿದು ಪರೀಕ್ಷಿಸುತ್ತಾನೆ. ಅಂಜದೆ ಅಳುಕದೆ ತಾಳ್ಮೆಗೆಡದೆ ಧೈರ್ಯಗೆಡದೆ ಅಚಲರಾಗಿ ನಂಬಿಕೆರೆದೊಡೆ ಓ ಗೊಡದೆ ಇರುತ್ತಾನೆಯೆ? ಭಕ್ತಿಯ ಭಾವಕ್ಕೆ ಹೊಲಿಯದ ದೇವನಿದ್ದಾನೆಯೆ? ಭಕ್ತಿಕಂಪಿತ ನಮ್ಮ ಕೂಡಲ ಸಂಗಮದೇವನಲ್ಲವೆ ? ಆದ್ದರಿಂದ ಏನೇ ಕಷ್ಟ ಕಾರ್ಪಣ್ಯಗಳು ಬಂದರೂ ನೋವುನಲಿವುಗಳು ಒಂದೊಂದಿಗಿದರೂ ಸರ್ವಶಕ್ತನಾದ ಭಗವಂತನ ಮೇಲೆ ಭಾರ ಹಾಕಿ ಕಾರ್ಯೋನ್ಮುಖರಾದಾಗ ಸರ್ವ ಕೋಟಲೆಗಳು ಹರಿದೋಡುತ್ತವೆ. ಸರ್ವ ಪಾತಕಗಳೂ ಶಿವನಾಮಕ್ಕಂಜುತ್ತವೆ, ಭಕ್ತ ಭಾವಕ್ಕೆ ಭವತಿಮಿರಹರಿಯುತ್ತದೆ. ಭಕ್ತಿಯಿಂದ ಭಾವಪರವಶನಾದ ಭಕ್ತನಿಗೆ ಸೋಲುವ ಪರಿಯೆಂತು. ಆಪರಾತ್ಪರ ವಸ್ತುವಿನ ಒಲುಮೆಯು ತಾರಕ ಶಿವಮಂತ್ರದ ಬಲವಿರುವಾಗ ಭಕ್ತನಿಗೆ ಗೆಲುವಲ್ಲದೆ ಮತ್ತೇನು.

—ದುಂಬಿ

ಓಂ ಶ್ರೀ ಗುರುಬಸವಲಿಂಗಾಯನಮಃ

# ಗ್ರಾಮಾಂತರ ಬಸವ ಜಯಂತ್ಯುತ್ಸವ ಸಮಾರಂಭ

—ಪಿ. ಎನ್. ಚಂದ್ರಶೇಖರಯ್ಯ

ತ್ರಿವಿಧ ದಾಸೋಹಂಭಾವಿಗಳೂ, ಲಿಂಗಲೀಲಾ ವಿನೋದ ಚಿತ್ತರೂ, ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯರೂ ಆದ ಶ್ರೀಮನ್ನಿರಂಜನ ನಿರಾಭಾರಿ ಪ್ರಣವ ಸ್ವರೂಪಿ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಗ್ರಾಮಾಂತರ ಬಂಧುಗಳಿಗೆ, ವಿಶ್ವಬಂಧು, ಮಾನವಪ್ರೇಮಿ, ಜಗಜ್ಯೋತಿ ಶ್ರೀ ಬಸವೇಶ್ವರರ ಜೀವನ ಹಾಗೂ ತತ್ತ್ವೋಪದೇಶ ಪ್ರಚಾರದ ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದರು. ಇಂದು ಇಡೀ ದೇಶದಾದ್ಯಂತ ಕೇಳಿಬರುತ್ತಿರುವ ಬಡಜನೋದ್ಧಾರ, ಅಸ್ಪೃಶ್ಯತಾ ನಿವಾರಣೆ, ದೀನದಲಿತ ಕಲ್ಯಾಣ ಇತ್ಯಾದಿಘೋಷಣೆಗಳನ್ನು, ಎಂಟುನೂರು ವರ್ಷಗಳಹಿಂದೆಯೇ ಘೋಷಿಸಿ ಕಾರ್ಯಾಚರಣೆಗೆ ತಂದ ಮಹಾನುಭಾವ ಶ್ರೀ ಬಸವೇಶ್ವರರತತ್ತ್ವಪ್ರಚಾರವೇ ಶ್ರೀ ಶ್ರೀಗಳವರ ಈ ಕಾರ್ಯಕ್ರಮದ ಮುಖ್ಯ ಉದ್ದೇಶ. ಇಂದು ಅಂಧ ಶ್ರದ್ಧೆಗಳು ಮೂಢನಂಬಿಕೆ ಅಜ್ಞಾನಗಳಿಂದ ನರಳುತ್ತಿರುವ ಹಲವಾರು ಜನತೆಯನ್ನು ಬಡಿ ಎಬ್ಬಿಸುವ ಏಕೈಕ ಧ್ಯೇಯ. ನಮ್ಮ ರಾಷ್ಟ್ರವು ಸ್ವತಂತ್ರವಾಗಿ ಮೂರುದಶಕಗಳು ಸಂದಿದ್ದರೂ ಸ್ವತಂತ್ರ ಜೀವನದ ದುರುಪಯೋಗದ ತಿಳಿವಳಿಕೆಯೂ ಇದಾಗಿದೆ. ನಮ್ಮ ಸಮಾಜದ ಅಶಿಸ್ತು, ಅಕ್ರಮ, ಅನೀತಿ, ಅನ್ಯಾಯ, ಅಶಾಂತಿ ಹಾಗೂ ಅಧರ್ಮಗಳ ಹೊಡೆತಕ್ಕೆ ಸಿಕ್ಕಿ ಜರ್ಝರಿತವಾಗಿದೆ. ಇದನ್ನರಿತ ಶ್ರೀ ಶ್ರೀಗಳವರು ಇಂದಿನ ಎಲ್ಲಸಮಸ್ಯೆಗಳಿಗೂ, ಎಲ್ಲ ಜನಾಂಗಕ್ಕೂ ಮತ್ತು ಎಲ್ಲರಿಗೂ ಅನ್ವಯವಾಗುವ, ಎಲ್ಲರ ಕಲ್ಯಾಣಕ್ಕೂ ಸಾಧಕವಾಗಿರುವ, ಅತಿಸುಲಭ ಹಾಗೂ ಸರಳವಾಗಿ ಅನುಸರಿಸಲು ಯೋಗ್ಯವಾದ ಶ್ರೀ ಬಸವೇಶ್ವರ ಮತ್ತು ಅವರ ಸಮಕಾಲೀನ ಶಿವಶರಣರು ನಿತ್ಯನಿಜ ಜೀವನದಲ್ಲಿ ಆಚರಣೆಯಲ್ಲಿ ತಂದಿದ್ದ ಅನುಭವದ ಅನುಭವೋಕ್ತಿಗಳ ಪ್ರಚಾರ ಕಾರ್ಯವು ಶ್ರೀ ಶ್ರೀಗಳವರ ದಿವ್ಯನೇತೃತ್ವದಲ್ಲಿ ಮೂರು ದಿನಗಳು ನಡೆದವು. ಅಲ್ಲಿ ನಡೆದ ಕಾರ್ಯಕ್ರಮಗಳ ವಿವರ ಈ ಕೆಳಕಂಡಂತಿದೆ.

1 ಶ್ರೀ ಶ್ರೀಗಳವರ ಅಪ್ಪಣೆಯ ಮೇರೆಗೆ ಶ್ರೀ ಮಠದ ಭಕ್ತಮಂಡಲಿಯವರು ದಿನಾಂಕ 5-5-79ರ ಮಂಗಳವಾರ ಬಸವ ಜಯಂತ್ಯುತ್ಸವವನ್ನೂ ಬೆಂಗಳೂರು ಜಿಲ್ಲೆ ಮಾಗಡಿ ತಾಲ್ಲೂಕು ಬ್ಯಾಲಕೆರೆಯಲ್ಲಿ ಏರ್ಪಡಿಸಲಾಗಿತ್ತು. ಅಂದು ಬೆಳ್ಳಿಗ್ಗೆ 8-00ಕ್ಕೆ ಸರಿಯಾಗಿ ಊರಹೊರಗೆ ಕಿಕ್ಕಿರದ ಜನಸ್ತೋಮ ಶ್ರೀ ಶ್ರೀಗಳವರಿಗೆ ನಂದಿಧ್ವಜ ಕೊಂಬು ಕಹಳೆ ತಾಳೆ ಮದ್ದಳೆ ಛತ್ರಿ ಚಾಮರ ಸಹಿತ ಭವ್ಯಸ್ವಾಗತವನ್ನು ಮಾಡಿತು. ಶ್ರೀ ಶ್ರೀಗಳವರನ್ನು ಭಕ್ತಿಪೂರಿತ ವೈಭವ ಮೆರವಣಿಗೆಯಿಂದ ಊರ ಹೊಳಗೆ ಕರೆತರಲಾಯಿತು. ಅಂದು ಸುತ್ತ ಹತ್ತಾರು ಊರವರಿಗೆ ಅಂದು ಜಾತ್ರೆ ಹಾಗೂ ಹಬ್ಬದವಾತಾವರಣ.

ಶ್ರೀ ಶ್ರೀಗಳವರನ್ನು ತಳಿರುತೋರಣಗಳಿಂದಲೂ ನಾನಾಬಣ್ಣದ ವಸ್ತ್ರಾಲಂಕಾರಗಳಿಂದಲೂ ನಿರ್ಮಿಸಲಾಗಿದ್ದ ಭವ್ಯ **ಅನುಭವ** ಮಂಟಪಕ್ಕೆ 8-00 ಕ್ಕೆ ಕರೆತರಲಾಯಿತು 11-30 ರವರೆಗೆ ಬಸವಣ್ಣನವರ ಬಗೆಗೆ ಪ್ರವಚನ ಮತ್ತು ವಿದ್ವಾಂಸರ ಭಾಷಣಗಳು ವಚನ ಸಂಗೀತಗಳು ನಡೆದವು. ಅನಂತರ ಶ್ರೀ ಶ್ರೀಗಳವರು ತಮ್ಮ ಆಶೀರ್ವಚನದಲ್ಲಿ ಬಸವಣ್ಣನವರ ಜೀವನ ಹಾಗೂ ಬದುಕಿನ ಸಂದೇಶವನ್ನು ಕರುಣಿಸಿದರು. 12 ಘಂಟೆಗೆ ಶ್ರೀ ಶ್ರೀಗಳವರ ಪಾದಪೂಜೆಯು ಭಕ್ತರ ಅಭೀಷ್ಟೆಯಂತೆ ಜರುಗಿತು. ಬಂದ ಭಕ್ತರಿಗೆ ಜ್ಞಾನಪ್ರಸಾದವಾದನಂತರ ಬ್ಯಾಲಕೆರೆ ಮತ್ತು ಸುತ್ತಮುತ್ತಲಿನ ಜನರ ನೆರವಿನಿಂದ ಅನ್ನಪ್ರಸಾದದ ವಿನಿಯೋಗವಾಯಿತು.

ಸಾಯಂಕಾಲ 3 ರಿಂದ 6 ಘಂಟೆಯವರೆಗೆ ವಿದ್ವಾಂಸರಿಂದ ಪ್ರವಚನ ಭಾಷಣ ಸಂಗೀತ ಕಾರ್ಯಕ್ರಮಗಳು

(28 ನೇಪುಟ ನೋಡಿ)



ವೀರಶೈವ ಧರ್ಮದಲ್ಲಿ

# ಕಾಯಕದ ಮಹತ್ವ ಹಾಗೂ ಪ್ರಯೋಜನ

—ವಿ. ಕೆ. ಹಾವರ್ಗಿ

ಭಾರತದ ಶ್ರೇಷ್ಠತರವಾದ ಧರ್ಮಗಳಲ್ಲಿ ವೀರಶೈವ ಧರ್ಮವೂ ಒಂದಾಗಿದೆ. ಈ ವೀರಶೈವ ಧರ್ಮವು ಬಸವೇಶ್ವರರ ಕಾಲಕ್ಕೆ ಹೆಚ್ಚು ಬೆಳಕಿಗೆ ಬಂದಿತು. ಬುದ್ಧಿಪ್ರಧಾನವಾದ ಶಂಕರಾಚಾರ್ಯರ ಮಾಯಾವಾದವೂ ಜನಸಾಮಾನ್ಯತೆಗೆ ಹಿಡಿಯದೆ ಹೋಯಿತು. ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಜೈನ ಈ ಮತ ಮತಾಂತರಗಳಿಂದ ವಿಚಾರಗೊಂದಲವು ತಲೆದೋರಿದಂತಾಗಿ ಜನತೆಯು ಧಾರ್ಮಿಕ ರಂಗದಲ್ಲಿ ನೇರವಾದ, ಸರಳವಾದ ಹಾದಿಯನ್ನು ಕಾಣದೆ ಬಳಲಹತ್ತಿತು. ನೂರಾರು ಕಿರುಕುಳ ದೇವತೆಗಳ ಕಲ್ಪನೆಯಿಂದಲೂ ಜನತೆ ಕಂಗಾಲಾಗ ಹತ್ತಿತ್ತು. ಇಂತಹ ಸಂದರ್ಭದಲ್ಲಿಯೇ ಬಸವಣ್ಣನವರ ಜನನವಾಗಿ ಶೈವಧರ್ಮದ ಕ್ರಾಂತಿಕಾರಕ ಸುಧಾರಣೆಗಳಾದವು. ಅವರಿಂದಲೇ ವೀರಶೈವ ಧರ್ಮವೆಂಬ ಹೊಸ ಧರ್ಮವು ಪ್ರಚಾರವಾಯಿತು. ಹೀಗೆ ವೀರಶೈವ ಧರ್ಮವು ಬಸವೇಶ್ವರರ ಕಾಲಕ್ಕೆ ಹೆಚ್ಚು ಬೆಳಕಿಗೆ ಬಂದಿತು. "ಭಾರತದ ಯಾವ ಧರ್ಮವೂ ವೀರಶೈವ ಧರ್ಮದಂಥ ವ್ಯಾಪಕವಾದ ಧಾರ್ಮಿಕ ಮತ್ತು ನೈತಿಕ ಸೂತ್ರಗಳನ್ನು ನೀಡಿಲ್ಲ" ಎಂದು ಸಿ. ಪಿ. ಬ್ರೌನ್ ಅವರು ವೀರಶೈವ ಧರ್ಮದ ಬಗೆಗೆ ತಮ್ಮ ಮೆಚ್ಚುಗೆಯನ್ನು ಸೂಚಿಸಿದ್ದಾರೆ. ಇಂಥ ಶ್ರೇಷ್ಠವಾದ ವೀರಶೈವ ಧರ್ಮದಲ್ಲಿ ಕಾಯಕಕ್ಕೆ ಬಹಳ ಮಹತ್ವವಿದೆ. ಶಿವಶರಣರು ತಮ್ಮ ತಮ್ಮ ಕಾಯಕಗಳನ್ನು ಆಚರಿಸುತ್ತ ತಮ್ಮ ಜೀವನವನ್ನು ಸಾರ್ಥಕಪಡಿಸಿಕೊಂಡಿದ್ದಾರೆ. "ಕ್ಯಾಯಕವೇ ಕೈಲಾಸ" ಎಂದು ನುಡಿದಿದ್ದಾರೆ. ಶಿವಶರಣರ ಚರಿತ್ರೆಗಳನ್ನು ಓದಿದಾಗ, ಅವರು ನುಡಿದಂತೆ ನಡೆದು ಘನ ವ್ಯಕ್ತಿತ್ವವನ್ನು ಪಡೆದದ್ದು ಕಂಡು ಬರುತ್ತದೆ. ವೀರಶೈವ ಧರ್ಮದಲ್ಲಿ ಕಾಯಕದ ಸ್ಥಾನ ಕೈಲಾಸದ ಮಟ್ಟಕ್ಕೆ ತಲುಪಿದೆ,

ಪುರಾತನದಲ್ಲಿ ಶಿವಶರಣರು ಯಾವ ರೀತಿಯಾಗಿ ಕಾಯಕಕ್ಕೆ ಮಹತ್ವಕೊಟ್ಟು ಆಚರಿಸಿದ್ದಾರೆಂದು ತಿಳಿದುಕೊಳ್ಳುವದು ಅವಶ್ಯಕವಾಗಿದೆ. ಅದರಿಂದ ಕಾಯಕದ ಮಹತ್ವ ಹಾಗೂ ಅದರಿಂದಾಗುವ ಪ್ರಯೋಜನಗಳು ಕ್ರಮೇಣವಾಗಿ ನಮಗೂ ತಿಳಿದುಬರುತ್ತವೆ. ಇದಕ್ಕಿಂತ ಮುಂಚಿತವಾಗಿ, ಯಾವುದಕ್ಕೆ ಕಾಯಕವೆನ್ನಬೇಕು ? ಮತ್ತು ಕಾಯಕ ಹಾಗೂ ಉದ್ಯೋಗ ಇವುಗಳಲ್ಲಿರುವ ವ್ಯತ್ಯಾಸವಾದರೂ ಏನು ? ಎಂಬುದರ ಬಗ್ಗೆ ಸ್ವಲ್ಪ ತಿಳಿದುಕೊಳ್ಳುವುದು ಉಪಯುಕ್ತವಾಗಿದೆ.

ಕೇವಲ ಕಾಯ ಪೋಷಣೆಗಾಗಿ ಅವಶ್ಯವೆನಿಸಿದ ವಸ್ತುಗಳನ್ನು ಯಥೇಚ್ಛೆಯಾಗಿ ಸಂಗ್ರಹಿಸಲು ಕೈಕೊಂಡ ಯಾವುದಾದರೊಂದು ಉದ್ಯೋಗವು ಕಾಯಕಪದವಾಚ್ಯವಾಗದು. ಜೀವನವನ್ನು ದೇವನ ಮಟ್ಟಕ್ಕೇರಿಸಬಲ್ಲ ಅರ್ಥಾತ್ ಜೀವಾತ್ಮ ಪರಮಾತ್ಮರಲ್ಲಿ ಸಮರಸವನ್ನುಂಟು ಮಾಡಬಲ್ಲ ಮಹಾಯೋಗರೂಪವಾದುದು ಕಾಯಕ. ಪ್ರೇಯ-ಶ್ರೇಯಗಳ ಸುಂದರ ಸಮನ್ವಯ ಮಾಡುವದು ಕಾಯಕಕ್ಕೆ ಮಾತ್ರ ಸಾಧ್ಯ.

ಉದ್ಯೋಗ ಹಾಗೂ ಕಾಯಕ ಇವುಗಳಲ್ಲಿಯ ಭೇದವು ಕರ್ತೃವಿನ ಅಂತರಿಕ ಭಾವನೆಯನ್ನು ಅಪೇಕ್ಷಿಸಿರುವದು. ದೇಹಾತ್ಮ ಭಾವನೆಯಿಂದ ಮಾಡಿದ್ದು ಉದ್ಯೋಗ ಆಧ್ಯಾತ್ಮ ಭಾವನೆಯಿಂದ ಮಾಡಿದ್ದು ಕಾಯಕ. ಉದ್ಯೋಗದಲ್ಲಿ ಸ್ವಾರ್ಥಭಾವ ತುಂಬಿಕೊಂಡಿದ್ದರೆ ಕಾಯಕದಲ್ಲಿ ಪರಾರ್ಥ ಭಾವನೆಯು ತುಂಬಿಕೊಂಡಿರುವದು. ಅಂತೆಯೇ ತನಗಾಗಿ, ತನ್ನ ರಕ್ತಸಂಬಂಧಿಗಳಿಗಾಗಿ ಎಂದು ಮಾಡುವುದು ಉದ್ಯೋಗವೆಂದು, ಗುರುಲಿಂಗ-ಜಂಗಮರಿಗಾಗಿ, ಸಮಾಜ ನಾಡಿನ ಕಲ್ಯಾಣಕ್ಕಾಗಿ ಎಂದು ಮಾಡುವುದು ಕಾಯಕವೆಂದು ಅನುಭಾವಿಗಳು

ಕೇವಲ ಮೌಖಿಕವಾಗಿ ಅಲ್ಲ, ಪ್ರತ್ಯಕ್ಷ ತಮ್ಮ ಕೃತಿಯಿಂದಲೇ ತೋರಿಸಿಕೊಟ್ಟಿದ್ದಾರೆ.

## ಕಾಯಕವೇ ಕೈಲಾಸ

ಶಿವಾನುಭವದಲ್ಲಿ ಕಾಯಕಕ್ಕೆ ಒಂದು ಮಹತ್ವದ ಸ್ಥಾನವು ಪ್ರಾಪ್ತವಾಗಿದೆ. ಅದು ಶರಣರಲ್ಲಿ ಧಾರ್ಮಿಕ ಸ್ವರೂಪವನ್ನು ಹೊಂದಿದೆ. ಇದೊಂದು ಕರ್ನಾಟಕದ ಶಿವಶರಣರ ವೈಶಿಷ್ಟ್ಯವು. ಯಾವ ಶಿವಶರಣನಿದ್ದರೂ ಕೂಡ ಅವನು ಕೆಲವೊಂದು ಕಾಯಕವನ್ನು ಪಾಲಿಸಲೇ ಬೇಕು. ಮಠಾಧಿಕಾರಿಗಳಿಗೂ ಈ ತತ್ವವು ಅನ್ವಯಿಸುತ್ತದೆ. ಇದರಿಂದ ಶಿವಶರಣರು ಅನೇಕ ತರದ ಜನರಿಗೆ ಸಂಬಂಧವುಳ್ಳವರಾದರು. ದಿನಾಲು ದುಡಿದು ಗಳಿಸಬೇಕೆಂಬುದೇ ಅವರ ಬೋಧೆಯು. ದಿನಕ್ಕೆ ಸಾಲುವಷ್ಟಕ್ಕಿಂತ ಹೆಚ್ಚಿಗೆ ದೊರಕಿಸಬಾರದು ಎಂದು ಅವರು ಹೇಳುತ್ತಾರೆ. ಇದರಿಂದ ಶಿವಶರಣರು ಸ್ವತಂತ್ರ ಜೀವಿಗಳಾಗಿದ್ದಾರೆ. ಅವರು ಆರ ಮೊರೆ ಹೊಗರು.

ಕಲ್ಯಾಣದಲ್ಲಿ ಶಿವಶರಣರ ಸಂಭ್ರಮವೇ ಸಂಭ್ರಮ. ಪ್ರತಿದಿನ ಶರಣ ಸಂಗೋಷ್ಠಿಯು ಅನುಭವ ಮಂಟಪದಲ್ಲಿ ಸೇರುತ್ತಿತ್ತು. ಏನಾದರೊಂದು ಅಮೋಘ ತತ್ವವು ಒಂದೊಂದು ದಿನವು ಹೇಳಲ್ಪಡುತ್ತಿತ್ತು. ಒಂದು ದಿನ ಆಯ್ದಕ್ಕಿ ಮಾರಯ್ಯ "ಕಾಯಕವೇ ಕೈಲಾಸ" ಎಂಬ ತನ್ನ ಸ್ವಾನುಭವವನ್ನು ಅನುಭವ ಮಂಟಪದಲ್ಲಿ ಶಿವಶರಣರ ಮುಂದೆ ನಿರೂಪಿಸಿದನು.

"ಕಾಯಕದಲ್ಲಿ ನಿರುತನಾದಡೆ ಗುರುದರ್ಶನವಾದಡೂ ಮರೆಯಬೇಕು. ಲಿಂಗಪೂಜೆಯಾದಡೂ ಮರೆಯಬೇಕು. ಜಂಗಮ ಮುಂದಿದ್ದಡೆಯೂ ಹಂಗು ಹರಿಯಬೇಕು. ಕಾಯಕವೇ ಕೈಲಾಸವಾದ ಕಾರಣ ಅಮರೇಶ್ವರ ಲಿಂಗವಾಯಿತ್ತಾದರೂ ಕಾಯಕದೊಳಗು" ಎಂಬ ತತ್ವವನ್ನು ಪ್ರತಿಪಾದಿಸಿದನು. ಪ್ರಭುವೂ ಸಹ ಶರಣರ ಅನುಭಾವವನ್ನು ಕೇಳಿ ತನ್ನ ಅಭಿಮತವನ್ನು ಹೀಗೆ ನಿರೂಪಿಸಿದ್ದಾನೆ. "ಕಾಯಕವೇ ಕೈಲಾಸ" ಎಂಬುದು ನಿಜ ಆದರೆ ನಾನು ಕಾಯಕವನ್ನು ಮಾಡುತ್ತೇನೆ ಅದರಿಂದ ಗುರುಲಿಂಗ ಜಂಗಮವನ್ನು ತಣಿಸುತ್ತೇನೆ ಎಂಬ ಭಾವನೆ ಇರಬಾರದು. ಅಂಥ ಕಾಯಕದಿಂದ ಪ್ರಯೋಜನವಿಲ್ಲ. ಈಶ್ವಾರ್ಪಣ (ಈಶ್ವರಾರ್ಪಣ) ಬುದ್ಧಿಯಿಂದ ನಿಷ್ಕಾಮ ಕಾಯಕ ಮಾಡಬೇಕು.

"ಮಾಡುವ ಮಾಟದಿಂದವೇ ಬೇರೊಂದನರಿಯಬೇಕು. ಅರುವಿಂಗೆ ನೆಮ್ಮುಗೆ ಒಡಗೂಡಬೇಕು. ಅರುವಿಂಗೆ ನೆಮ್ಮುಗೆ ಒಡಗೂಡದ ಬಳಿಕ ಬಯಲ ಭ್ರಮೆಯ ಕಳೆದು, ನಮ್ಮ ಗುಹೇಶ್ವರ ಲಿಂಗದಲ್ಲಿ ನಿಜಪದವನ್ನೈದುವುದು ಮಾರಯ್ಯ" ಎಂದು ಪ್ರಭು ಭಾವಶುದ್ಧವಾದ ನಿಷ್ಕಾಮ ಕಾಯಕವೇ ಶ್ರೇಷ್ಠವೆಂದು ತಿಳಿಸಿದನು.

ಮಾರಯ್ಯ ದಿನವಿಡಿ ಬಸವಣ್ಣನ ಮಹಮನೆಯ ಅಂಗಳದಲ್ಲಿಯೂ, ಶರಣರ ಮನೆಯ ಕಸದಲ್ಲಿಯೂ ಚೆಲ್ಲಿದ್ದ ಅಕ್ಕಿಯನ್ನು ಆಯ್ದು ತಂದು ತಾನೂ, ತನ್ನ ಪತ್ನಿಯೂ ಗುರುಲಿಂಗ ಜಂಗಮಸೇವೆ ಮಾಡುತ್ತಿದ್ದರು. ಇದೇ ಆತನ ಕಾಯಕವಾಗಿತ್ತು.

ಕಾಶ್ಮೀರ ದೇಶದ ರಾಜದಂಪತಿಗಳಾದ ಮೋಳಿಗೆಯ ಮಾರಯ್ಯ ಮತ್ತು ಆತನ ಪತ್ನಿ ಮಹಾದೇವಿಯಮ್ಮ ಅವರು ರಾಜ್ಯವನ್ನು ತ್ಯಜಿಸಿ ವೈರಾಗ್ಯಭಾವದಿಂದ ಕಲ್ಯಾಣಕ್ಕೆ ಬಂದು ಜಂಗಮಾರ್ಚನೆಯಿಂದ ಸಂತೋಷಿಸುತ್ತಿದ್ದರು. ಆತನು ಕಾಡಿನಿಂದ ಕಟ್ಟಿಗೆ ಹೊರೆಗಳನ್ನು ಹೊತ್ತು ತಂದು, ಮಾರಿ ಜಂಗಮ ದಾಸೋಹ ನಡೆಸುತ್ತಿದ್ದನು.

ಶರಣನಾದ ಸುಲಿಯ ಚಂದಯ್ಯನು ಹಗ್ಗಗಳನ್ನು ಹೊಸೆದು, ಮಾರಿ ಬಂದ ಹಣದಿಂದ ಗುರುಲಿಂಗ ಜಂಗಮ ಸೇವೆ ಮಾಡುತ್ತಿದ್ದನು.

ಬಾಹೂರ ಬ್ರಹ್ಮಯ್ಯನು ತನ್ನ ತೋಟತನದ ಕಾಯಕದಿಂದ ಶರಣರ ಸೇವೆ ಮಾಡುತ್ತ, ಶಿವಾನುಭವಿಗಳ ಸಂಗದಿಂದ ಶಿವಾನುಭವವನ್ನು ಚನ್ನಾಗಿ ಪಡೆದನು.

ಭಕ್ತರ ಮನೆಗಳಿಗೆ ಹೋಗಿ ಅವರ ಮನೆಗುಡಿಸುವ ಕಾಯಕವನ್ನು ಮಾಡುತ್ತಿದ್ದ ಶಿವಕಿಂಕರಯ್ಯನು, ಹೀಗೆ ಕಾಯಕ ಮಾಡುವಲ್ಲಿ ಭಕ್ತರು ಕೊಟ್ಟಿದ್ದರಲ್ಲಿ ತಾನು ಜೀವಿಸುತ್ತ ಉಳಿದದ್ದನ್ನು ಶರಣರಿಗೆ ಸಲ್ಲಿಸುವ ನಿಯಮವನ್ನು ಕೈಕೊಂಡನು. ಇದೇ ತನ್ನ ಪರಮಾತ್ಮನ ಸೇವೆ, ಇದರಿಂದಲೇ ತಾನು ಪರಮ ಪದವಿಯನ್ನು ಹೊಂದುವೆನೆಂದು ಭಾವಿಸಿದನು.



ಮೊರನ ವೇಮಯ್ಯನು ಮೇದರನ ಕಾಯಕವನ್ನು ಮಾಡುತ್ತಿದ್ದು ವೃದ್ಧಾಪ್ಯ ಕಾಲದಲ್ಲಿಯೂ ಕೂಡ ಮೊರದ ಕಾಯಕವನ್ನು ಬಿಡಲಿಲ್ಲ. ವೇಮಯ್ಯನು ಪ್ರತಿದಿನ ಬೆಟ್ಟಕ್ಕೆ ಹೋಗಿ ಕಂಪಿಸುವ ಕರಗಳಿಂದ ಬಿದಿರುಗಳನ್ನು ಕೊಯ್ದು ಅಸ್ತಮಯ ಕಾಲದಲ್ಲಿ ಮನೆಗೆ ಅವುಗಳನ್ನು ತಂದು, ನಾಲ್ಕೆರಡು ಮೊರಗಳನ್ನು ಹೆಣೆದು ಅವುಗಳನ್ನು ಮಾರಿ ಶಿವಭಕ್ತಿಯುಳ್ಳವನಾಗಿ, ಕಲ್ಯಾಣಪಟ್ಟಣದಲ್ಲಿ ಜೀವನ ಸಾಗಿಸುತ್ತಿದ್ದನು. ಬಸವಾದಿ ಶಿವಶರಣರು ಅವನ ಶುದ್ಧ ವರ್ತನೆಯನ್ನು ತಿಳಿದುಕೊಂಡವರಾಗಿ ಅವನಿಗೋಸ್ಕರ ಅತ್ಯಂತ ಭಕ್ತಿಭಾವವನ್ನು ತಾಳಿ ಅವನನ್ನು ಬಹಳವಾಗಿ ಮನ್ನಿಸುತ್ತಿದ್ದರು.

ತನ್ನ ಮೊದಲಿನ ಬ್ರಾಹ್ಮಣ ವೃತ್ತಿಯನ್ನು ಚೌಡಯ್ಯನು ಬಿಟ್ಟುಕೊಟ್ಟು ಒಂದು ಕಾಯಕವನ್ನು ಕೈಕೊಂಡನು. ಇದರಿಂದ ತನಗೆ ಹೀನತನವು ಪ್ರಾಪ್ತವಾಯಿತೆಂದು ಅವನು ಭಾವಿಸಲಿಲ್ಲ. ಇದು ಶಿವಶರಣರ ಆಚರಣೆಯ ಪರಿಣಾಮವಾಗಿದೆ. ಯಾಕೆಂದರೆ ಶಿವಾನುಭವದಲ್ಲಿ ಭಿಕ್ಷೆಗೆ ಸ್ಥಾನವಿಲ್ಲ. ಕಾಯಕಕ್ಕೆ ಅದು ಮಹತ್ವ ಕೊಟ್ಟಿರುತ್ತದೆ.

ಶಿವಶರಣರು ಕೈಲಾಸಕ್ಕೆ ಮಹತ್ವ ಕೊಟ್ಟಿಲ್ಲ. ಅವರು ಲಿಂಗಾಂಗ ಸಾಮರಸ್ಯಕ್ಕೆ ಮಹತ್ವ ಕೊಟ್ಟಿದ್ದಾರೆ. ಈ ಸಾಮರಸ್ಯವು ಇಹದಲ್ಲಿದ್ದರೂ ಕೂಡ ಭಕ್ತನಿಗೆ ದೊರೆಯುತ್ತಿದೆಂದು ಶಿವಶರಣರು ತಿಳಿದು ದಾಗೆ ಆಚರಿಸಿದ್ದಾರೆ. ಎಲ್ಲಿ ತಿಳಿಯಾದ ನೀರು, ಸೊಗಸಾದ ಪುಷ್ಪಗಳು, ಎಳೆದಾದ ತಳಿರುಗಳಿವೆಯೋ ಅಲ್ಲಿಯೇ ಅವರ ದೇವಾಲಯವು. ಅವರು ತಮ್ಮ ಪೂಜಾದಿಕಾರ್ಯಗಳನ್ನು ಅಲ್ಲಿಯೇ ತೀರಿಸುತ್ತಾರೆ. ಅಲ್ಲಿಯೇ ಅವರು ಪರಮಾತ್ಮನ ಧ್ಯಾನದಲ್ಲಿರುತ್ತಾರೆ. ಈ ಧ್ಯಾನವು ತೀರಿದ ಬಳಿಕ ಅವರು ತಮ್ಮ ನಿತ್ಯದ ಕಾಯಕಗಳಲ್ಲಿ ತೊಡಗುತ್ತಾರೆ. ಹೀಗೆ ಅವರು ಲಿಂಗಾಂಗ ಸಾಮರಸ್ಯವನ್ನು ಇಹದಲ್ಲಿಯೇ ಹೊಂದುವರು. ಶಿವಶರಣರು ತಮ್ಮ ಕಾಯಕಗಳನ್ನು ಮಾಡುತ್ತ ಸಾಮರಸ್ಯವನ್ನು ಹೇಗೆ ಹೊಂದಿದರೆಂಬುದನ್ನು ಕೆಲವು ಉದಾಹರಣೆಗಳಿಂದ ತಿಳಿದು ನೋಡುವ.

ಮಾದರ ಧೂಳಯ್ಯನು ಕಲ್ಯಾಣ ಪಟ್ಟಣದಲ್ಲಿ ಮೊಚ್ಚೆ ಹೊಲಿಯುವ ಕಾಯಕವನ್ನು ಮಾಡುತ್ತಿದ್ದನು. ಅವನು ಈ ಕಾಯಕದಿಂದ ತನಗೆ ದೊರಕಿದಷ್ಟು ಹಣವನ್ನು ಶರಣರ ಸೇವೆಗೆ ಸಲ್ಲಿಸುತ್ತ ದಾಸೋಹಭಾವದಿಂದ ಇರುತ್ತಿದ್ದನು. ಹೀಗೆ ಕೆಲವು ಕಾಲ ಗತಿಸಲು, ಪರಮಾತ್ಮನು ಧೂಳಯ್ಯನ ಕಾಯಕದ ಮಹತ್ವವನ್ನು ಜಗತ್ತಿಗೆ ತೋರಿಸಬೇಕೆಂದು ಬಯಸಿ, ಒಂದು ದಿನ ಧೂಳಯ್ಯನು ಚಮ್ಮಾವುಗೆಯನ್ನು ಉಳಿಯಿಂದ ಹೊಲಿಯುತ್ತ ಕುಳಿತಿರಲು ಆ ಉಳಿಯ ಮೊನೆಯಲ್ಲಿಯೇ ಆ ಮೊಚ್ಚೆಯಲ್ಲಿ ಪರಮಾತ್ಮನು ರೂಪುದೋರಿದನು. ಮತ್ತು ಆ ರೂಪಿನಲ್ಲಿಯೇ ಆ ಧೂಳಯ್ಯನು ಅಡಗಿಹೋದನು ಸಾಮರಸ್ಯವು ಶರಣರ ಜೀವಿತದ ಧ್ಯೇಯವಾಗಿದೆ. ಆದ್ದರಿಂದ ಪರಮಾತ್ಮನು ಧೂಳಯ್ಯನನ್ನು ಈ ರೀತಿ ತನ್ನಲ್ಲಿ ಅಡಗಿಸಿಕೊಂಡನು. ಮಾದರ ಧೂಳಯ್ಯನಿಗೆ ಇಲ್ಲಿ ಮೊಚ್ಚೆ ಹೊಲಿಯುವುದೇ ಲಿಂಗಪೂಜೆಯಾಗಿ ಪರಿಣಮಿಸಿತು. ಹೇಗೆ ಸೊಹಳಿಯ ಸೋಮವ್ವೆಗೆ ದೀಪದ ಕುಡಿಯಲ್ಲಿ ಜ್ಯೋತಿರ್ಲಿಂಗವು ಆವಿರ್ಭವಿಸಿತೋ, ಹಾಗೆಯೇ ಮಾದರ ಧೂಳಯ್ಯಗೆ ಮೊಚ್ಚೆ-ಜೋಡನ್ನು ತನ್ನ ಉಳಿಯಿಂದ ಹೊಲಿಯುತ್ತಿರುವಾಗ ಆ ಉಳಿಯ ಮೊನೆಯಲ್ಲಿಯೇ ಪರಮಾತ್ಮನು ಪ್ರಕಟವಾದನು.

ಚಿಕ್ಕಮಾದಣ್ಣನು ಲಿಂಗಾರ್ಚನೆಯನ್ನು ಮಾಡುವ ಭಕ್ತರಿಗೆ ದೂರ್ವಾಂಕುರ, ಪತ್ರಿಹೂವುಗಳನ್ನು ತಂದು ಕೊಡುವ ಕಾಯಕವನ್ನು ಮಾಡುತ್ತಿದ್ದು, ಈ ಕಾಯಕದಿಂದ ಬಂದದ್ದನ್ನು ಶರಣರ ಸೇವೆಗೋಸ್ಕರ ಉಪಯೋಗಿಸುತ್ತ ಶಿವಾನುಭವಿಯಾಗಿ ಪಟ್ಟಣದಲ್ಲಿ ಎಲ್ಲರಿಗೂ ಪ್ರಿಯನಾಗಿದ್ದನು. ಒಂದು ದಿನ ಚಿಕ್ಕಮಾದಣ್ಣನು ದೂರ್ವಾಂಕುರಕ್ಕೆ ಹೋದ ಸಮಯದಲ್ಲಿ ಶಿವನು ಪ್ರತ್ಯಕ್ಷನಾಗಿ, ಎಲೋ ಚಿಕ್ಕಮಾದಣ್ಣನೇ, ಈಗ ನನ್ನ ಕೂಡ ನಡೆ, ನಿನಗೆ ಗಣಪದವಿಯನ್ನು ಕೊಡುತ್ತೇನೆ ಎಂದು ಹೇಳಲು, ಅದಕ್ಕೆ ಚಿಕ್ಕಮಾದಣ್ಣನು ಈ ಕಲಿಯುಗದಲ್ಲಿ ಶಿವಾರ್ಪಣದಿಂದ ಕ್ರಿಯೆಯನ್ನು ಮಾಡುವುದೇ ಅಧಿಕವು ಂಥವರಿಗೆ ಕ್ರಿಯಾಸಮಾಧಿಯೇ ಹೆಚ್ಚಿನದು. ನಿನ್ನ ಪ್ರಸನ್ನತ್ವವು ನನಗೆ ಹೆಚ್ಚಿನದಲ್ಲ, ಎಂದು ನುಡಿಯಲು ಶಿವನು ಹತಾಶನಾಗಿ ಕೈಲಾಸಕ್ಕೆ ಹೊರಟುಹೋದನು.

ಪರಮಾತ್ಮನ ಸ್ತೋತ್ರ ಮಾಡುತ್ತ ಜನರಲ್ಲಿ ಶಿವಾನುಭವದ ತತ್ವಗಳನ್ನು ಬೋಧಿಸುತ್ತಿರುವುದೇ

ಗಣೇಶ್ವರನ ಕಾಯಕವಾಗಿತ್ತು ಇದರಿಂದ ಅವನು ಸಾಮರಸ್ಯ ಸ್ಥಿತಿಯನ್ನು ಹೊಂದಿ, ಪುರಾತನ ಕಾಲದಲ್ಲಿ ಪ್ರಸಿದ್ಧನಾದನು.

ಶಿವಶರಣನಾದ ಅಲ್ಲಯ್ಯನು ಸಂಗೀತದಲ್ಲಿ ಬಲ್ಲದನಾಗಿ ಲಿಂಗಕ್ಕೆ ಗಾನವನ್ನು ಕೇಳಿಸುವ ಕಾಯಕವನ್ನು ಕೈಕೊಂಡಿದ್ದನು. ಪರಮಾತ್ಮನು ಅವನ ಭಕ್ತಿಗೆ ಪ್ರೀತನಾಗಿ ಅವನಿಗೆ ಸಾಮರಸ್ಯ ಪದವಿಯನ್ನು ಇತ್ತನು. ಮನುಷ್ಯನು ತನ್ನಲ್ಲಿರುವ ವಿಶೇಷ ಗುಣಗಳನ್ನು ಜನಸೇವೆಗೋಸ್ಕರ, ಉಪಯೋಗಿಸುವುದರಲ್ಲಿಯೇ ಶಿವಾನುಭವವಿರುತ್ತದೆಂಬುದು ಅಲ್ಲಯ್ಯನ ಚರಿತ್ರದಿಂದ ತಿಳಿದುಬರುತ್ತದೆ.

ಭಕ್ತರನ್ನು ನಗಿಸುವುದೇ ಮಾರಿ ತಂದೆಯ ಕಾಯಕವಾಗಿತ್ತು. ಒಂದು ದಿನ ತಾನು ತೊಂದರೆಯಲ್ಲಿದ್ದಾಗ್ಯೂ ತನ್ನ ಹಾಸ್ಯ ವೃತ್ತಿಯನ್ನು ಬಿಡದೆ ಇದ್ದುದರಿಂದ ಪರಮಾತ್ಮನು ಅವನಿಗೆ ಪ್ರೀತನಾಗಿ ಅವನಿಗೆ ಕಾಯಕದ ಹಣವನ್ನು ಕೊಟ್ಟು ತೆರಳಿದನು. ಹೀಗೆ ಎಂಥ ವಿಪತ್ತುಗಳು ಬಂದರೂ ನಗೆ ಮಾರಿ ತಂದೆಯು ಯಾವಾಗಲೂ ಆನಂದದಿಂದ ಇದ್ದು ತನ್ನ ಶಿವಾನುಭವವನ್ನು ನಡೆಸಿದ್ದರಿಂದ ಅವನು ಲಿಂಗಾಂಗ ಸಾಮರಸ್ಯ ಸ್ಥಿತಿಯನ್ನು ಹೊಂದಿದನು.

ಈ ಪ್ರಕಾರ ಹಿಂದಿನ ಕಾಲದಲ್ಲಿ ಶಿವಶರಣರು ವಿವಿಧ ಕಾಯಕಗಳನ್ನು ಕೈಕೊಂಡು ಜನಸೇವೆ ಮಾಡುತ್ತ ಸಾಮರಸ್ಯವನ್ನು ಹೊಂದಿದ್ದಾರೆ. ಶಿವಶರಣರು ತಾವು ಕೈಕೊಂಡ ಕಾಯಕದಲ್ಲಿಯೂ ಆಚರಣೆಯಲ್ಲಿಯೂ ದೃಢಬುದ್ಧಿಯುಳ್ಳವರಾಗಿ ಆಚರಿಸಿದ್ದಾರೆ. ಪ್ರಾಣಹೋಗುವ ಪ್ರಸಂಗ ಒದಗಿದರೂ ಕೂಡ ಅವರು ತಾವು ಹಿಡಿದ ಕಾರ್ಯಗಳನ್ನು ಬಿಡರು. ಹೀಗೆ ವರ್ತಿಸುವುದೇ ಅವರಿಗೆ ವ್ರತವು, ನಿಯಮವು. ಬಸವಾದಿ ಪ್ರಮಥರ ತತ್ವಗಳು ಶುದ್ಧವೂ, ಸಾತ್ವಿಕವೂ ಆಗಿದ್ದು ಅವುಗಳ ಮೂಲಕ ಅವರ ಕಾಲದಲ್ಲಿ ಸ್ತ್ರೀಯರೂ ಸಹ ಪರಮಾರ್ಥದಲ್ಲಿದ್ದುಕೊಂಡು ತಮ್ಮ ಕಾಯಕಗಳನ್ನು ನಡೆಸುವಲ್ಲಿ ಹೇಗೆ ತತ್ಪರರಾಗಿದ್ದರೆಂಬುದು ರೆಮ್ಮವ್ವೆಯ ವಚನಗಳಿಂದ ತಿಳಿದುಬರುತ್ತದೆ. ಸಪ್ಪೆಯಲ್ಲಮದೇವನು, ಏಲೇಶ ಕೇತಯ್ಯ, ಇಂಡಿಯ ಶಾಂತಯ್ಯನು, ಬಡಿಹೋರಿ ಬ್ರಹ್ಮಯ್ಯನು ತಾವು ಹಿಡಿದ ಕಾಯಕಗಳಲ್ಲಿ ಎಂಥ ಕಷ್ಟಗಳು ಬಂದರೂ ಅವರು ಅವುಗಳನ್ನು ಬಿಡಲಿಲ್ಲ. ಆದ್ದರಿಂದ ಅವರು ಸಾಮರಸ್ಯಪದವನ್ನು ಹೊಂದಿದರು.

## ಬಡಿ-ಹೋರಿ ಬ್ರಹ್ಮಯ್ಯನ ದೃಷ್ಟಿಯಲ್ಲಿ ಕಾಯಕ.

ಮನುಷ್ಯನು ಪ್ರತಿದಿನ ಅಪರಾಧಗಳನ್ನು ಅಥವಾ ಪಾಪಗಳನ್ನು ಮಾಡಿಯೇ ಮಾಡುತ್ತಾನೆ. ಅವುಗಳಾಗದಂತೆ ಇರುವುದು ಅವಶ್ಯವೇ ಸರಿ. ಆದರೆ ಅವು ಘಟಿಸಿದರೆ ಅವುಗಳನ್ನು ಹೇಗೆ ದೂರ ಮಾಡಿಕೊಳ್ಳಬೇಕೆಂಬುದು ಪ್ರತಿಯೊಂದು ಧರ್ಮದಲ್ಲಿ ಮಹತ್ವದ ಪ್ರಶ್ನೆಯಾಗಿದೆ. ಇಂಥ ಅಪರಾಧಗಳನ್ನು ಕಾಯಕದ-ಮೂಲಕವೇ ದೂರ ಮಾಡಿಕೊಳ್ಳಬೇಕೆಂದು ಶಿವಶರಣರ ವಿಚಾರಗಳಿವೆ. ಈ ಈ ಸಂಗತಿಯನ್ನೇ ಅವರ ಚರಿತ್ರೆಗಳೆಲ್ಲ ಹೇಳುತ್ತವೆ.

ಅಹಿಂಸಾವ್ರತಕ್ಕೆ ಯಾವಾಗಲೂ ಬಹಳ ಮಹತ್ವ ಕೊಟ್ಟಿದ್ದಾರೆ ಶಿವಾನುಭವಿಗಳು ಬಡಿಹೋರಿ ಬ್ರಹ್ಮಯ್ಯನು ತನ್ನ ಹೋರಿಯನ್ನು ಹೊಡೆದು ಕೊಂದದ್ದರಿಂದ ಅವನಿಗೆ ಹಿಂಸಾದೋಷವು ಪ್ರಾಪ್ತವಾಯಿತು. ಆಗ ಅವನು ತಾನು ಪಾಪವನ್ನು ಮಾಡಿದನೆಂದು ಅತ್ಯಂತ ಪಶ್ಚಾತ್ತಾಪ ಪಟ್ಟನು. ಇದನ್ನು ಪರಿಹಾರ ಮಾಡಲು ಅವನು ಬಡಿಸಿಕೊಳ್ಳುವ ಕಾಯಕವನ್ನು ಕೈಕೊಂಡನು. ಇದು ಒಂದು ಬಗೆಯ ಆತ್ಮ ಸುಧಾರಣೆಯ ಕಾರ್ಯವಾಗುತ್ತದೆ. ಅಲ್ಲದೆ ಇದರಲ್ಲಿ ಲೋಕ-ಸೇವೆಯೂ ಉಂಟು. ಜನರು ಅವನನ್ನು ಹೊಡೆಯಲು ಸಿದ್ಧರಾಗಬೇಕಾದರೆ, ಜೀವಹಿಂಸೆಯು ಸರಿಯಾದುದಲ್ಲವೆಂಬ ತಿಳುವಳಿಕೆಯು ಅವರಲ್ಲಿ ದೃಢಪಟ್ಟಿರಬೇಕು. ಬ್ರಹ್ಮಯ್ಯನ ಕ್ರಿಯೆಯು ಇಂಥ ತಿಳಿವಳಿಕೆಯನ್ನುಂಟುಮಾಡಲು ಕಾರಣವಾಯಿತು. ಬರೆ ಬಾಯಿಮಾತಿನ ಬೋಧೆಯಿಂದ ಪರಿಣಾಮವಾಗದು. ಬ್ರಹ್ಮಯ್ಯನು ತನ್ನ ಕಾಯವನ್ನು ಕ್ಲೇಶಪಡಿಸುವದರಿಂದ ಅವನು ಜನರಿಗೆ ಅಹಿಂಸೆಯ ಮಹತ್ವವನ್ನು ತಿಳಿಸಿಕೊಟ್ಟಂತಾಯಿತು, ಆದ್ದರಿಂದ ಇದರಲ್ಲಿ ಲೋಕಸೇವೆಯೂ ಇದೆ.

ಹೀಗೆ ಬ್ರಹ್ಮಯ್ಯನ ಕ್ರಿಯೆಯಲ್ಲಿ ಆತ್ಮ-ಸುಧಾರಣೆಯೂ ಇದೆ, ಲೋಕಸೇವೆಯೂ ಇದೆ. ಆದ್ದರಿಂದ ಅವನ ಕ್ರಿಯೆಯು ಕಾಯಕವನ್ನು ಕೈಕೊಳ್ಳಬೇಕು. ಮೊದಲು ದುಡಿದುಗಳಿಸಬೇಕೆಂದೇ ಇದರ ಅರ್ಥ.



ರೀತಿಯಾಗಿ ಗಳಿಸಿದ್ದನ್ನು ಪ್ರಸಾದರೂಪವಾಗಿ ಉಪಯೋಗಿಸಿ, ನಂತರ ಅದರಲ್ಲಿ ಉಳಿದದ್ದನ್ನು ಭಕ್ತಾದಿಗಳು ಅಥವಾ ಗುರುಲಿಂಗ ಜಂಗಮರಿಗೆ ಸಲ್ಲಿಸಬೇಕುಹೀಗೆ ಸಲ್ಲಿಸುವುದೇ ದಾಸೋಹವು.

ಮೇಲಿನ ಸಂಗತಿಯಿಂದ ತಿಳಿದು ಬರುವದೇನಂದರೆ ಶಿವಾನುಭವಿಯು ದುಡಿಯದೇ ಹಣವನ್ನು ಸಂಗ್ರಹಿಸಬಾರದು, ಶಿವಶರಣರ ಚರಿತ್ರೆಗಳು ಇದನ್ನೇ ಹೇಳುತ್ತವೆ. ಶಕ್ತಿ ಇರುವವರೆಗೂ ಶಿವಾನುಭವಿಯು ಪ್ರತಿದಿನ ಕಾಯಕ ಮಾಡುತ್ತಲೇ ಇರಬೇಕು. ಅದರಮೇಲೆಯೇ ಅವನು ತನ್ನ ಜೀವನಸಾಗಿಸಬೇಕು. ಆದರೆ ತಾನು ಕೂಡಿಸಿಟ್ಟ ಹಣದ ಮೇಲೆ ಅವನು ಉಪಜೀವಿಸಬಾರದು. ಅದು ಅವನನ್ನು ಸೋಮಾರಿಯನ್ನಾಗಿ ಮಾಡುತ್ತದೆ.

ದೋಷಗಳು ಹೋಗಬೇಕಾದರೆ ಮಾಡಿದ ಅಪರಾಧಕ್ಕೋಸ್ಕರ ಮೊದಲು ಪಶ್ಚಾತ್ತಾಪ-ಪಡಬೇಕು. ನಂತರ ಕೆಲವೊಂದು ಕಾಯಕವನ್ನು ಕೈಕೊಳ್ಳಬೇಕೆಂದು ಬ್ರಹ್ಮಯ್ಯನು ಹೇಳುತ್ತಾನೆ. ಅಲ್ಲದೆ ಲಿಂಗಾರ್ಪಣಯುಕ್ತನಾಗಿ ತಾನು ಕೈಕೊಂಡ ಕಾಯಕಗಳನ್ನು ಮಾಡಬೇಕೆಂದು ಹೇಳಿದ್ದಾನೆ. ಇದರಿಂದ ದೋಷಗಳು ಹೊರಟುಹೋಗಿ ಲಿಂಗ ಕಳೆಯು ಅವನ ಪ್ರಾಣ, ಮನ, ಬುದ್ಧಿ ಇಂದ್ರಿಯಗಳಲ್ಲೆಲ್ಲ ತುಂಬುತ್ತ ಹೋಗುವುದು. ಅಪರಾಧಗಳನ್ನು ಈ ರೀತಿಯ ಕಾಯಕದ ಮೂಲಕವೇ ದೂರಮಾಡಿಕೊಳ್ಳಬೇಕು. ಇದೇ ಅವನಿಗೆ ವ್ರತ, ಜಪ, ತಪ, ನಿಯಮವಾಗಿ ಪರಿಣಮಿಸುತ್ತದೆಂದು ಬ್ರಹ್ಮಯ್ಯನು ಖಚಿತಪಡಿಸಿ ತೋರಿಸಿದ್ದಾನೆ.

ಜಯವಾದರೆ ಹೆಚ್ಚು, ಅಪಜಯವಾದರೆ ಕಡಿಮೆ ಎಂದು ತಿಳಿಯಬಾರದು. ಶರಣರಿಗೆ ಮಾಡಿದ ಕ್ರಿಯೆಯು ಮಹತ್ವವಲ್ಲ. ಪರಮಾತ್ಮನಿಗೆ ಅವುಗಳನ್ನರ್ಪಿಸಿ ಕಾರ್ಯಮಾಡುವದೇ ಅವರ ಕರ್ತವ್ಯವಾಗಿರುತ್ತದೆ.

## 3. ಬಸವಣ್ಣನವರ ದೃಷ್ಟಿಯಲ್ಲಿ ಕಾಯಕ

ಎಲ್ಲ ಶರಣರನ್ನು ಕೂಡಿಕೊಂಡು "ಅನುಭವ ಮಂಟಪ" ವನ್ನು ಕಟ್ಟಿ, ಮಾನವ ಕುಲ ಒಂದೇ ಎಂದು ಸಾರಿ, ಕಾಯಕವೇ ಕೈಲಾಸವೆಂದು ನುಡಿದು, ನಡೆದು ಅನುಭಾವದ ಹೊಸ-ಹಾದಿಯನ್ನು ಮಾನವ ಕುಲಕ್ಕೆ ತೋರಿಸಿದರು ಮಹಾನುಭಾವಿ-ಬಸವಣ್ಣನವರು. ಪ್ರತಿಯೊಬ್ಬರು ದುಡಿಯಲೇಬೇಕೆಂಬ ತತ್ವದಿಂದ ಸ್ವಯಂಪೂರ್ಣ ಸಮಾಜವನ್ನು ನಿರ್ಮಿಸಲು ಅವರು ಪ್ರಯತ್ನಿಸಿದರು. ಅವರ 'ಕಾಯಕ' ತತ್ವದಿಂದ ದುಡಿಮೆಯ ಗೌರವವನ್ನು ಭೋಧಿಸಿ ಅದರ ಮಹತ್ವವನ್ನು ಒತ್ತಿ ಹೇಳಿದರು. ಕಾಯಕ ಯಾವುದೇ ಇರಲಿ, ಅದು ಬಸವಣ್ಣನವರ ಅಭಿಪ್ರಾಯದಲ್ಲಿ ಸಮರ್ಪಣೆ ಹಾಗೂ ಪವಿತ್ರ ಎನಿಸಿದ್ದರಿಂದ ಆದಕ್ಕೊಂದು ಹೊಸ ಹಾಗೂ ಹೊಸ ಹಿರಿಮೆ ಒದಗಿತು.

ಪ್ರತಿಯೊಬ್ಬ ವ್ಯಕ್ತಿಯೂ ಉದರ ನಿರ್ವಹಕ್ಕಾಗಿ, ಸಮಾಜಸೇವೆಗಾಗಿ, ಧರ್ಮದ ಆಚರಣೆಗಾಗಿ, ತನ್ನ ಉನ್ನತಿಗಾಗಿ, ಸಾಮಾಜಿಕ ಭದ್ರತೆಗಾಗಿ ಕಾರ್ಯ-ಮಾಡಲೇಬೇಕೆಂಬ ಬಸವಣ್ಣನವರ ತತ್ವವು ನವ ಸಮಾಜ ರಚನೆಗೆ ನವೀನ ಸ್ಫೂರ್ತಿಯನ್ನೊದಗಿಸಿತು. ಜಾಕತಿಕ ಪ್ರಗತಿಪರ ವಿಚಾರ ಪ್ರಣಾಲಿಯಲ್ಲಿ, ಶಿವಶರರಣರ ಕಾಯಕ ತತ್ವದ ಸೂಕ್ಷ್ಮವಾದ ಆಚರಣೆಯು ಅಮೂಲ್ಯವಾಗಿದೆ. ಜಾತಿಗಳ ಮೇಲು-ಕೀಳು, ಸಾಮಾಜಿಕ ಅಂತಸ್ತಿನ ವಿಷಮತೆ, ಧಾರ್ಮಿಕ ರಂಗದಲ್ಲಿಯ ಕಾದಿಟ್ಟ ಹಕ್ಕುಗಳು ಇವುಗಳನ್ನು ಒಂದೇ ಏಟಿಗೆ ತೊಡೆದು ಹಾಕುವಲ್ಲಿ ಬಸವಣ್ಣನವರ ಕಾಯಕತತ್ವವು ಸಾರ್ಥಕತೆಯನ್ನು ಪಡೆಯಿತು. ಈ ಕಾಯಕ ತತ್ವವನ್ನು ಅಂದಿನ ಶಿವಶರಣರು ಆಚರಿಸಿದ ಬಗೆಯು ಅನುಪಮವಾಗಿದೆ. ಆಧುನಿಕ ಪ್ರಗತಿಪರ ವಿಚಾರ ಪ್ರಣಾಲಿಯಉಗಮವು ಈ ಕಾರ್ಯ ತತ್ವದಲ್ಲಿದೆಯೆನ್ನಬಹುದು. ದೈಹಿಕಕಾರ್ಯದ ಕಡ್ಡಾಯದ ನಿಯಮವು ಸಮಾಜದ ಆರ್ಥಿಕ ಭದ್ರತೆಗೂ ಕಾರಣವಾಗಿ ಶೋಶಕವರ್ಗಕ್ಕೆ ಕುಠಾರ ಪ್ರಾಯವಾಗಿ ಪರಿಣಮಿಸಿತು.

ಬಸವಣ್ಣನವರ ಕಾಲದಲ್ಲಿ ಕಾಯಕದಲ್ಲಿ ನಿರತರಾದ, ಬಹುಸಂಖ್ಯೆಯ ಶರಣರ ಹೆಸರುಗಳು, ಬಹುಮುಖ್ಯವಾದ ಉದ್ಯೋಗಗಳು ಸಮಾಜ ಸುಧಾರಣೆಯ, ಲೋಕಕಲ್ಯಾಣದ ಇತಿಹಾಸದಲ್ಲಿ ಬೋಧಪ್ರದವಾಗಿ ಉಳಿಯತಕ್ಕವುಗಳಾಗಿವೆ. ಈ ದಿಸೆಯಲ್ಲಿ ಕಾರ್ಯಕೈಕೊಂಡ ಬಸವಣ್ಣನವರು ಜನತೆಯಲ್ಲಿ ಗಾಢವಾದ ಸಂಪರ್ಕವನ್ನು ಬೆಳಸಿಕೊಳ್ಳಲು ಸಮರ್ಥರಾದರು. ಕರ್ನಾಟಕದ ಬಹುಜನ ಸಮಾಜ ಮದ್ಯ-ಮಾಂಸಗಳಿಂದ ದೂರ

ಉಳಿದಿರುವದು ಬಸವಣ್ಣನವರ ದುಡಿಮೆಯ ಫಲವೇ ಆಗಿದೆ.

ಹೆಣ್ಣು, ಹೊನ್ನು, ಮಣ್ಣುಗಳನ್ನು ಬಿಟ್ಟೋಡ ಬೇಕಾಗಿಲ್ಲ. ಹೆಣ್ಣನ್ನು ಮಹಾದೇವಿ ಎಂದು ಭಾವಿಸಿ, ಹೊನ್ನಿಗಾಗಿ ದುಡಿದು ಹೊನ್ನನ್ನು ತನಗಾಗಿ, ಜನತೆಗಾಗಿ ವೆಚ್ಚಿಸಿ, ಮಣ್ಣಿನ ಮನೆಯಾದಈ ಲೋಕವನ್ನು ಕೈಲಾಸವನ್ನಾಗಿ ರೂಪಿಸಿ, ಮಣ್ಣಿನಮಂದಿರವಾದ ಈ ದೇಹವನ್ನೇ ದೇವಾಲಯವನ್ನಾಗಿ ರೂಪಿಸಿ, ಅಂತರಂಗದಲ್ಲಿರುವ ಸ್ವಾತ್ಮ ಸಂಗಮನಾಥನ ಸಾಕ್ಷಾತ್ಕಾರಕ್ಕೆ ಜೀವನವನ್ನೇ ಅಣಿಗೊಳಿಸಿ, ಸಮಾಧಾನದಿಂದ ಬಾಳುವದೇ ಮಾನವ ಜೀವನದ ಪರಮ ಸಾಧನೆ ಎಂಬ ಸತ್ಯವನ್ನು ಜನತೆಯಲ್ಲಿ ಬಿತ್ತಿದರು ಬಸವಣ್ಣನವರು. ಕಾಯಕ ತತ್ವವು ಶರಣ-ಸಮಾಜದ ಮೂಲಸೂತ್ರವಾಗಿದ್ದರಿಂದ ಎಲ್ಲರೂ ದುಡಿದು, ದಾಸೋಹಕಾರ್ಯದಲ್ಲಿ ನಿರತರಾಗಿದ್ದರು ಸತ್ಕಾಯಕದಿಂದ ಬಂದ ನ್ಯಾಯವಾದ ಹಣದಿಂದ ಅತಿಥಿಗಳಿಗೆ ನೀಡಿ, ಮಿಕ್ಕುಳಿದುದನ್ನು ಪ್ರಸಾದವೆಂದು ಪ್ರತಿಯೊಬ್ಬ ಭಕ್ತನೂ ಆಚರಿಸುವಂತಾಗಿತ್ತು. ಹೀಗಿದ್ದಲ್ಲಿ ಕೊಡುವವರ ಸಮಾಜ ನಿರ್ಮಿತವಾಯಿತೇ ಹೊರತು ಬೇಡುವವರನ್ನು ಕಾಣುವುದು ದುರ್ಲಭವಾಯಿತು.

ಕಾಯಕ ತತ್ವವನ್ನು ಒಪ್ಪಿದವನು ನಾಳೆಗೆ, ತನ್ನ ಮಡದಿ ಮಕ್ಕಳಿಗೆ ಹಾಗೆ ಹೀಗೆ ಎಂದುಕೊಂಡು ಪದಾರ್ಥಸಂಗ್ರಹ ಮಾಡುವಂತಿಲ್ಲ. "ಇಂದು ನಾಳೆಗೆಂದು ಚಿಂತಿಸಲೇಕೆ, ತಂದಿಕ್ಕುವ ಶಿವನಿಗೆ ಬಡತನವೇ ರಾಮನಾಥ" ಎಂದು ಶರಣರ ದೃಢನಿರ್ಧಾರ. ಅಂದು ಬಂದುದು ಅಂದೇ ವ್ಯಯಮಾಡಬೇಕು. ನಿನ್ನಿದು ಉಳಿದರೆ ಇಂದಿಗೆ ಅದು ತಂಗೂಳ! ಅದಕ್ಕಾಗಿ ಸಂಗ್ರಹ ಬುದ್ಧಿ ಸಲ್ಲದೆಂದು ವಚನ-ಶಾಸ್ತ್ರ ಸಾರುತ್ತದೆ. ಇದರಿಂದ ತಿಳಿದುಬರುವದೇನಂದರೆ-ಪ್ರತಿದಿನ ಕಾಯಕ ಮಾಡಲೇಬೇಕು. ಅಂದು ಬಂದುದನ್ನು ಆ ದಿನವೇ ವ್ಯಯಮಾಡಿ ಮತ್ತೆಮರುದಿನ ಕಾಯಕವನ್ನಾಚರಿಸಲು ಸಮರ್ಥರಾಗಿ ನಿಲ್ಲಬೇಕು. ಹೀಗೆ ಮಾಡುವದರಿಂದ ಜನರು ಸೋಮಾರಿಗಳಾಗದೇ, ಸರಳ ಜೀವನ ಸಾಗಿಸಲು ಅರ್ಹರಾಗುತ್ತಾರೆ.

ಸಮಾಜದಲ್ಲಿ ತಮ್ಮ ಅರ್ಥಕಾಮಗಳನ್ನು ಸಾಧಿಸಿಕೊಳ್ಳಲು ಬಯಸುವವರು ತಮ್ಮ ಕರ್ತವ್ಯಶೃಂಖಲೆಗಳಿಂದ ಬದ್ಧರಾಗಲೇ ಬೇಕಾಗುವದು. ಅದರಿಂದ ತಮ್ಮ ಅಧಿಕಾರವೂ ಸುರಕ್ಷಿತವಾಗಿರಲು ಸಾಧ್ಯವಾಗುವದು. ಕರ್ತವ್ಯದ ಕಡೆಗೆ ಗಮನ ಕೊಡದೆ ಕೇವಲ ಅಧಿಕಾರದತ್ತ ತಮ್ಮ ದೃಷ್ಟಿಯನ್ನು ಹಾಕಿದವರು ಸಮಾಜದಲ್ಲಿ ವಿಷಮವಾತಾವರಣವನ್ನು ಪಸರಿಸುವರು. ಪ್ರತಿಯೊಬ್ಬನು ತನ್ನ ಕರ್ತವ್ಯಪಾಲನ ವಹಿಸುವಲ್ಲಿ ಎಚ್ಚರ ಹೊಂದಿದಷ್ಟೂ ಅವನು ತನ್ನ ಅಧಿಕಾರವನ್ನು ಪಡೆದು ಸಂತೃಪ್ತನಾಗುತ್ತಾನೆ ಜನರು ತಮ್ಮ ಕರ್ತವ್ಯವನ್ನು ಚನ್ನಾಗಿ ಅರಿತು ಅದನ್ನು ಪಾಲಿಸುವಲ್ಲಿ ದಕ್ಷತೆಯನ್ನು ತೋರಿಸಿದಷ್ಟೂ ಸಮಾಜವು ತದ್ವಾರಾ ನಾಡು ಸಮೃದ್ಧವಾಗಲು ಅವಕಾಶ ದೊರೆಯುವುದು. ಈ ದೃಷ್ಟಿಯಿಂದ ಬಸವಣ್ಣನವರು ನಿರ್ಧಿಷ್ಟವಾದ ಸಮಾಜ ರಚಿಸಲು ಹೋರಾಡಿದರು. ಅದರ ಪರಿಣಾಮವಾಗಿ ಪೂರ್ಣ-ಜ್ಞಾನದ ತಳಹದಿಯ ಮೇಲೆಯೇ ಸಮಾಜ ರಚನೆಯಾಗುವಂತಾಯಿತು. ಅದರಿಂದ ಒಬ್ಬರ ಸ್ವಾರ್ಥ ಮತ್ತೊಬ್ಬರ ಸ್ವಾರ್ಥದ ಮೇಲೆ ದಾಳಿಮಾಡುವ ಪ್ರಸಂಗ ತಪ್ಪಿಹೋಯಿತು. ಇಷ್ಟೇಅಲ್ಲ, ಒಬ್ಬರು ಮತ್ತೊಬ್ಬರ ಸೇವೆ ಮಾಡುವಲ್ಲಿಯೇ ತಮ್ಮ ಕರ್ತವ್ಯದ ಪರಿಪೂರ್ಣತೆಯನ್ನು ಕಂಡುಕೊಳ್ಳುವಂತಾಯಿತು. ಎಲ್ಲಲ್ಲಿಯೂ ಇಂಥ ಸದ್ಭಾವನೆಯು ಅರಳಿನಿಂತುಕೊಂಡರೆ ಸಮಾಜದಲ್ಲಿ, ನಾಡಿನಲ್ಲಿ ಶಾಂತಿ-ಸಮಾಧಾನಗಳು ನೆಲೆಸಲು ತಡ ಹಿಡಿಯದು. ಅದಕ್ಕಾಗಿ ಬಸವಣ್ಣನವರು ಕಾಯಕಕ್ಕೆ ಬಹಳ ಮಹತ್ವವನ್ನು ಕೊಟ್ಟರು. ಅಷ್ಟೇಕೆ, ಅದೇ ಕೈಲಾಸವೆಂದೂ ಹೇಳಿದರು. ಅದೃಷ್ಟವಾದ ಕೈಲಾಸವನ್ನು ನಂಬಿ ಕುಳಿತುಕೊಳ್ಳುವದಕ್ಕಿಂತ ದೃಷ್ಟವಾದ ಕಾಯಕದಲ್ಲಿಯೇ ಕೈಲಾಸ ಸುಖವನ್ನು ಅನುಭವಿಸಲು ಜನರನ್ನು ಅಣಿಮಾಡಿದರು. ಇದು ಬಸವಣ್ಣನವರ ಅಪ್ರತಿಮ ಹಿರಿಮೆಗೆ ಸಾಕ್ಷಿಯಾಗಿರುತ್ತದೆ. ವ್ಯಯಕ್ತಿಕ ವಿಕಾಸಕ್ಕನುಕುಲವಾದ ಕರ್ತವ್ಯವು ಧರ್ಮ ಎಂತಲೂ, ಸಾಮೂಹಿಕ ವಿಕಾಸಕ್ಕನುಕೂಲವಾದ ಕರ್ತವ್ಯವು ನೀತಿ ಎಂತಲೂ, ಕರೆಯಿಸಿಕೊಳ್ಳುವವು. ಇವೆರಡೂ ಪರಸ್ಪರ ಪೋಷಕಗಳಾಗಿರುತ್ತವೆ. ಸಮಾಜವು ಚಿರಕಾಲ ಬದುಕಿಕೊಂಡಿರಲು ಇವೆರಡನ್ನೂ ಪಾಲಿಸಬೇಕಾಗುವದು ಎಂಬುದೇ ಬಸವಣ್ಣನವರ ವಿಚಾರ ಸರಣಿಯಾಗಿದೆ. ಆಧ್ಯಾತ್ಮಭಾವವು ಜನತೆಯಲ್ಲಿ ಅರಳಿನಿಂತಷ್ಟೂ ಆತ್ಮ ವಿಕಾಸ ಮಾರ್ಗದಲ್ಲಿ ಕಂಟಕವಾಗಿದ್ದ ಆರ್ಥಿಕ ಸಮಸ್ಯೆ



ಯು ಕೂಡ ಸುಲಭವಾಗಿಯೇ ಪರಿಹಾರವಾಗುತ್ತದೆ. ಜನತೆಯಲ್ಲಿದ್ದ ಭಯ, ದ್ವೇಷ, ಸಂಘರ್ಷ, ಸ್ವಾರ್ಥಗಳ ಸ್ಥಾನವನ್ನು ನಿರ್ಭಯ ಪ್ರೇಮ, ಪವಿತ್ರತೆ, ಪರಾರ್ಥ ಭಾವನೆಗಳು ಪಡೆದಾಗಲೇ ಶಾಂತಿ ಸಮಾಧಾನಗಳಿಂದ ಜನ ಬಾಳಲು ಅವಕಾಶ ದೊರೆಯುವದು. ಆರ್ಥಿಕ ದುರವಸ್ಥೆಯು ಜನರಲ್ಲಿ ದುಃಖ-ದಮ್ಮಾನಗಳನ್ನುಂಟು ಮಾಡುವದು ಎಂಬ ಕಾರಣದಿಂದಷ್ಟೇ ಅದು ಕೆಟ್ಟದೆಂದು ತಿಳಿಯಲಾಗದು, ಅದು ಮಾನವತ್ವವನ್ನೇ ಹಾಳು ಮಾಡಿ ಮಾನವರನ್ನು ದಾನವರನ್ನಾಗಿ ಮಾಡುವ ಭಯಾನಕ ಶತ್ರುವಾಗಿರುತ್ತದೆ. ಇದನ್ನೆಲ್ಲ ಚೆನ್ನಾಗಿ ತಿಳಿದುಕೊಂಡು, ಬಸವಣ್ಣನವರು ಕಾಯಕ-ತತ್ವದಿಂದ ಆರ್ಥಿಕ-ಪರಿಸ್ಥಿತಿಯನ್ನು ಸುಧಾರಿಸಲು ಪ್ರಯತ್ನಿಸಿದರು.

ತಮ್ಮ ಜೀವನವನ್ನು ಸಾಗಿಸಲು ಮತ್ತೊಬ್ಬರನ್ನು ಆಶ್ರಯಿಸುವದು ಮಹಾಪರಾಧ. "ದುಡಿಯುವವರಿಗೆ ಉಣ್ಣುವ ಅಧಿಕಾರ'' ಎಂಬ ತತ್ವವನ್ನು ಸಂಸ್ಕರಿಸಿ ಅಪ್ಪಿಕೊಂಡವರು ಬಸವಣ್ಣನವರು. ಪ್ರತಿಯೊಬ್ಬರ ಊಟವು 'ಕಜ್ಜಾಯ' ಎಂಬ ನಾಮವನ್ನು ಪಡೆದುದು ಆಗಲೇ. ಕಜ್ಜ ಎಂದರೆ ಉದ್ಯೋಗ, ಆಯವೆಂದರೆ ಅದರಿಂದ ಬಂದದ್ದು ಎಂಬ ಅರ್ಥ. ಬಸವಣ್ಣನವರು ಎಲ್ಲರೂ ಎಲ್ಲ ವಿಷಯದಲ್ಲಿಯೂ ಸ್ವತಂತ್ರರಾಗಿಯೇ ಇರಬೇಕೆಂದು ಹೇಳಿದ್ದನ್ನು ಸಾಧಿಸಲು ಕಾಯಕವೊಂದು ಪರಮೋಪಾಯವಾಯಿತು. ಜನತೆಯ ಮಹಾ ಶತ್ರುಗಳಾದ ಅಜ್ಞಾನ ಬಡತನ, ರೋಗ ಈ ಮೂರನ್ನೂ ಬಡಿದೋಡಿಸಲು ಕಾಯಕತತ್ವವೊಂದೇ ಪರಮಮಂತ್ರ ಸ್ವರೂಪವಾಯಿತು, ಬಸವಣ್ಣನವರ ಕಾಲದಲ್ಲಿ.

"ಮುಕ್ತಿಯನ್ನು ಪಡೆಯಲು ಅರಣ್ಯ ಪರ್ವತಗಳನ್ನು ಸೇರುವ ಅವಶ್ಯವಿಲ್ಲ. ತಾವಿದ್ದ ಊರಲ್ಲಿಯೇ, ಮನೆಯಲ್ಲಿಯೇ ತಮ್ಮ ತಮ್ಮ ಕಾಯಕ ಮಾಡುತ್ತಲೇ ಮುಕ್ತಿಪಡೆಯಲು ಸಾಧ್ಯವಿವೆ'' ಎಂದು ಬಸವಣ್ಣನವರು ಸಾರಿ-ತೋರಿಸಿದರು. —



## ಶ್ರೀ ಸಿದ್ಧಗಂಗಾ ಶ್ರೀಗುರು

ನಿಮ್ಮ ಔದಾರ್ಯದ ಆಳತೆಕಂಡವರಿಲ್ಲ,
ನಿಮ್ಮ ಸಹನೆ ಸಾಗರವ ಈಜಿನೋಡಿದವರಿಲ್ಲ
ನಿಮ್ಮ ಕಾರುಣ್ಯಕಾರಂಜಿಯಲಿ ಮಿಂಯದವರಿಲ್ಲ
ಕೋಟಿ ತೀರ್ಥಕೆ ಮಿಗಿಲು ನಿಮ್ಮ ಶ್ರೀ ಚರಣದರ್ಶನ
ಶ್ರೀ ಸಿದ್ಧಗಂಗಾ ಶ್ರೀಗುರು.

‡ ‡ ‡

ಅಂತಃಕರಣದಮೃತ ಗಂಗೆಯನು ನಿನ್ನಂತೆ ಹರಿಸಿದವ
ರಾರಯ್ಯಾ
ಅಂತರಂಗದ ಬೆಳಕ ನಾಡಿನುದ್ದಗಲದಲಿ ನಿನ್ನಂತೆ ಚೆಲ್ಲಿದವ
ರಾಯ್ಯಾ
ಅನುಭಾವದೆತ್ತರದ ಉತ್ತುಂಗಭಾವಗಳ ನಿನ್ನಂತೆ ಬಿತ್ತಿದವ
ರಾರಯ್ಯಾ
ಅನುಪಮ ದಾನಿ, ಅನುಭಾವಮೂರ್ತಿ ಶ್ರೀ ಸಿದ್ಧಗಂಗಾ
ಶ್ರೀ ಗುರು.

‡ ‡ ‡

ನಿಮ್ಮ ಕಂಡ ಬಳಿಕ ಅನ್ಯರ ಕಾಣಬೇಕೆಂಬ ಹಂಬಲ ಬರಲಿಲ್ಲ,
ನಿಮ್ಮ ನುಡಿ ಕೇಳಿದ ಬಳಿಕ ಇನ್ನೊಂದ ಕೇಳಬೇಕೆಂಬ
ಬಯಕೆ ಯಾಗಲಿಲ್ಲ,
ನಿಮ್ಮ ಶ್ರೀ ಪಾದವ ಸೋಂಕಿದ ಬಳಿಕ ಇನ್ನೊಂದು ಮುಟ್ಟ
ಬೇಕೆಂಬ ಆಸೆಮೂಡಲಿಲ್ಲ
ಶ್ರೀ ಸಿದ್ಧಗಂಗಾ ಶ್ರೀಗುರು ನಿಮ್ಮ ಕಂಡು, ಕೇಳಿ, ಸೋಂಕಿ,
ಮುಟ್ಟಿಸುಖಿಯಾದೆ ನಯ್ಯಾ

—ಹರತಿ ವೀರೇಶ

## ಮೂರ್ಖರ ಲಕ್ಷಣ

ದುಡ್ಡು ಇದ್ದ ಸಮಯದಲ್ಲಿ ದಾನ ಧರ್ಮ
ಮಾಡದವ ಮೂರ್ಖ

ಮನಸ್ಸಿಗೆ ಬಂದಹಾಗೆ ನಡೆದು ಕೆಟ್ಟುಹೋದವ
ಮೂರ್ಖ

ಹೊಲ ಮನೆಗಳನ್ನು ಮಾರಿಕೇವಲ ಸುಖೋಪ
ಭೋಗದಲ್ಲಿ ಇರವವ ಮೂರ್ಖ

ಸಜ್ಜನರ ಮಾತು ಮೀರಿ ದೊಡ್ಡಕಾರ್ಯವನ್ನು ಕೈ
ಕೊಂಡು ಮುಗಿಸದಿರ್ದವ ಮೂರ್ಖ

ಜನರು ಹೀಯಾಳಿಸುತ್ತಿದ್ದರೂ ಕೇಳದವರಂತೆ
ಅಡ್ಡಾಡುವವ ಮೂರ್ಖ

ದೇವರನ್ನು ಮರೆತವ ಮಹಾಮೂರ್ಖ

—ಟಿ. ಎ ಲಲಿತಕುಮಾರಿ

# ಶಾಂತಿಯ ದಾರಿ

—ಪ. ರಾಮಕೃಷ್ಣ ಶಾಸ್ತ್ರಿ

ಮನಸ್ಸು ಅಶಾಂತಗೊಂಡಾಗ, ಆಲೋಚಿಸಿ ದಾರಿಯೇ ಸಿಕ್ಕದಾಗ ಕೊನೆಗೆ ನಾವು ಮೊರೆಹೋಗುವುದು 'ದೇವರದಯವಿದ್ದಂತಾಗಲಿ' ಎಂದು ದೇವರು ಇದ್ದಾನೆ, ಇಲ್ಲ ಎಂಬ ಚರ್ಚೆಯು ಇಂದಲ್ಲ, ನಿನ್ನೆಯದಲ್ಲ, ಎಷ್ಟೋ ಕಾಲದಿಂದ ನಡೆದು ಬಂದು–ಅದೊಂದುಕೊನೆಯಿಲ್ಲದ ವಾದ. ಹಿಂದೆಯೂ ಇಲ್ಲ, ಮುಂದೂ ಇಲ್ಲ, ಈಗ ನಾವಿರುವುದೇ ಸತ್ಯ; ತಿಂದುಂಡು ಸುಖಿಯಾಗಿರುವುದೇ ನಮ್ಮ ಆದ್ಯ ಕರ್ತವ್ಯವೆಂಬವರೂ ಇದ್ದಾರೆ. ಭೂತದಯಾ ಪರರಾಗದೆ, ಲೋಕಕಂಟಕರಂತೆ ಬಾಳುವ ಎಷ್ಟೋ ಮಂದಿ ಇಲ್ಲದಿಲ್ಲ. ಇಂಥವರಿಗೆ ಇದೇ ಸುಖ; ಬರೇ ಕ್ಷಣಿಕ ಸುಖ. ಜೀವನದ ಅಂತ್ಯ ತನಕ ಇಂಥ ಸುಖವಿದ್ದೀತೆಂದು ನಾವು ಹೇಳಲು ಬರುವಂತಿಲ್ಲ. ನಮ್ಮ ಅನ್ಯಾಯ ಜಗತ್ತಿಗೆ ಗೊತ್ತಾಗುವ ವರೆಗೆ ಹೀಗೆ ಮೆರೆಯಬಹುದು; ಅಥವಾ ಹಿರಿಯರು ಕೂಡಿಟ್ಟ ಹಣ ಮುಗಿಯುವ ವರೆಗೆ ಕಾಯಬಹುದು.

"ನಾನು ಆರು ನಾಟಕ ನೋಡಿದೆ; ಎಂಥ ಭವ್ಯ ಸೀನು ?!" ಎಂದು ಗೆಳೆಯನೊಬ್ಬ ವರ್ಣಿಸುವಾಗ ನಾಟಕ ನೋಡದವನೂ ಬಾಯಿತೆರೆದು, "ಆ! ನನಗಂಥ ಸುಖ ಸಿಗಲಿಲ್ಲವಲ್ಲ!" ಎಂದು ಹಂಬಲಿಸಿಯೇ ಬಿಡುತ್ತಾನೆ. ಹಾಗೆಯೇ ಅಂಥ ನಾಟಕ ಅವನಿಗೂ ಒಂದು ನೋಡಬೇಕೆಂದು ಹಂಬಲಬರುತ್ತದೆ. ಅದಕ್ಕಾಗಿ ವಿಶ್ವ ಪ್ರಯತ್ನಮಾಡಿ, ಕಿವಿಯ ಕಡಕು ಮಾರಿಯಾದರೂ ನಾಟಕ ನೋಡಿಬಿಡುತ್ತಾನೆ. ಇದೊಂದು ಮನಸ್ಸಿನ ಆಶೆ, ಕ್ಷಣಿಕ ತೃಪ್ತಿಗಾಗಿ ಹೋರಾಟ.

ಆದರೆ ಅಂಥದೊಂದು ಹೋರಾಟವನ್ನು ಜೀವನವಿಡೀ ದೊರಕುವ ಶಾಂತಿಗಾಗಿ ಮಾಡಿದರೆ ನಮಗಾಗುವ ನಷ್ಟವೇನು ? ಆ ದಿವ್ಯಶಾಂತಿಗಾಗಿ ತೀರಾ ಬನ್ನಬಡಬೇಕು; ನಿರಾಹಾರಿಯಾಗಿರಬೇಕು; ಭೋಗವಸ್ತುವನ್ನು ತ್ಯಜಿಸಬೇಕು ಎಂದು ಎಲ್ಲರ ಔದಾಸಿನ್ಯ. ಲಕ್ಷ ಖರ್ಚು ಮಾಡಿ, ಸುಂದರ ಹೆಣ್ಣನ್ನು ಮದುವೆಯಾದರೂ ಕೆಲವೊಮ್ಮೆ ನೆನೆಸಿದ ಸುಖ ಅವಳಿಂದ ದೊರಕದೆ ಅಶಾಂತರಾಗುತ್ತೇವೆ. ಸಂಸಾರವೊಂದು ನರಕ ಕೂಪವೆಂದು ಮನಸ್ಸಿಗೆ ಬಂದು, ಜೀವನವೇ ಬೇಸರವಾಗುತ್ತದೆ. ಒಂದು ಕ್ಷಣಿಕ ಸುಖವನನ್ನುಭವಿಸಿದ ತಕ್ಷಣ ನಮಗೆ ಬರುವುದು ನಿರಾಶೆಯೇ ಹೊರತು ಅದರಿಂದ ತೃಪ್ತಿಯಿಲ್ಲ. ತೃಪ್ತಿಪಟ್ಟರೂ ಕ್ಷಣಿಕ ತಾನೆ! ಆ ಬಳಿಕ ಇನ್ನೊಂದು ಆಶೆ ಬೇರೂರುತ್ತದೆ.

ದಾಸರು ಹೇಳಿದ್ದಾರೆ. "ಅನುಗಾಲವು ಚಿಂತೆ ಜೀವಕೆ............"

ಶ್ರೀಮಂತನಾದವನಿಗೆ ತನಗೆ ಬಂದ ಆಸೆಗಳನ್ನೆಲ್ಲ ಪೂರೈಸಿಕೊಳ್ಳಲು ಹಣದ ಬೆಟ್ಟವಿದೆ. ಆದರೂ ಅವನ ತೃಪ್ತಿ ಕೊನೆವರೆಗೂ ಆಗುತ್ತದೆಯೆ ? ಹೊಸ ಬಂಗಲೆಯಾಯಿತು. ಏರ್ ಕಂಡೀಷನ್ಡ್ ರೂಮಾಯಿತು. ಕಾರು ಬಂತು. ಲಾರಿ ಕೊಂಡಾಯಿತು. ಭೋಗಿಸಲು ತರುಣಿಯ ರಾಯಿತು–ಎಲ್ಲಾ ಆಯಿತು. ಆದರೆ ಇನ್ನು ಅವನಿಗೆ ಕೊರತೆಯೇ ಕಾಣಿಸುತ್ತದೆ. ನನ್ನ ಗೆಳೆಯನೊಬ್ಬ ಹೇಳುತ್ತಾನೆ: "ನನಗೇನೂ ಜೀವನ ಕೊರತೆಯಿಲ್ಲ. ಭೋಗಿಸಲು, ಕುಡಿಯಲು, ಉಣ್ಣಲು, ತಿನ್ನಲು–ಆದರೇನು, ಮನಸ್ಸಿಗೇಕೋ ತೃಪ್ತಿಯಿಲ್ಲ. ಏನೋ ಅಶಾಂತಿ, ಏನೆಂದದೇ ನನಗೆ ಅರ್ಥವಾಗುವುದಿಲ್ಲ".

ಮನುಷ್ಯನ ಆಕಾಂಕ್ಷೆಗಳೂ ಕಡಮೆಯಲ್ಲ. ಗುಮಾಸ್ತನಾದ ಮೇಲೆ ಶಿರಸ್ತೇದಾರ, ತಹಶಿಲ್ದಾರ, ಕಲೆಕ್ಟರ್...... ಹೀಗೇ ಮೇಲೇರುತ್ತಾ ಕೊನೆಗೆ ರಾಷ್ಟ್ರಪತಿಯಾದರೂ ಮನಸ್ಸಿಗೆ ಹಿತವಿಲ್ಲ. ಮತ್ತೂ ಮೇಲೇರುವ ಆಸೆ; ಮನಸ್ಸಿನ ಸಿಡಿಮಿಡಿ, ಕೊರತೆ....

ಇಂಥ ನಿರಾಶೆ ಬಾರದಂತೆ ನಮ್ಮ ಹಿರಿಯರು, ಋಷಿಗಳು ನಮಗೆ ಸುಲಭದದಾರಿಯನ್ನು ಹೇಳಿದ್ದಾರೆ. 'ದಿನದಲ್ಲಿ ಒಂದು ಕ್ಷಣ ಪ್ರಾರ್ಥನೆ ಮಾಡು' ಅಂತ. ಆ ಚಿಚ್ಛಕ್ತಿಯನ್ನು ಧ್ಯಾನಿಸಿ ಕೆಲಸಕ್ಕೆ ತೊಡಗು ಎಂದಿದ್ದಾರೆ. ದೇವರು ಎಂದರೆ ತಂದೆ–ತಾಯಿ. ಅವನ ಒಲವು ದೊರಕಿದರೆ ಅದು ಸವಿಯ ಸಕ್ಕರೆಯೆ. ಎಂದೆಂದಿಗೂ ಬಾಯಿಯಲ್ಲಿಟ್ಟು ಸವಿಯುವ ದಿವ್ಯವಾದ ಸಕ್ಕರೆ! ಅಂಥ ಸಕ್ಕರೆ ಎಂಥಾ ನಿರಾಸೆಯ ಸಮಯದಲ್ಲೂ ಆಶಾದಾಕವಾದ ತಂತು. ಪ್ರವಾಹದಲ್ಲಿ ಬಿದ್ದ ನಮ್ಮನ್ನು ಉದ್ಧರಿಸುವ ಕೈವರ್ತಕ (ನೌಕೆ).

ಇದು ವಿಜ್ಞಾನ ಯುಗ. ಮಾರಕವಾದ ಭೀಕರ ಅಸ್ತ್ರಗಳು ಹೆದರಿಸುವ ದಿನಗಳು! ಕರಾಳವಾಗಿ ಬಾಯ್ದೆರೆದು ಒಂದೇ ತುತ್ತಿಗೆ ಲಕ್ಷಗಟ್ಟಲೆ ಜನರ ಪ್ರಾಣಾಪಹರಣ ಮಾಡಲು ಕಾಲಯಮನಂತೆ ಕುಳಿತಿದೆ. ಸಾಮಾಜಿಕ, ರಾಜಕೀಯ ಎಲ್ಲ ಕಡೆಯೂ ನಿಗಿನಿಗಿ ಕೆಂಡವೇ ಕಾಣುತ್ತಿದೆ. ಎತ್ತನೋಡಿದರೂ ಶಾಂತಿಯಿಲ್ಲ. ಮನಸ್ಸು ಡುಗುಡಗೊಳ್ಳುತ್ತಿದೆ; ಮರುಕ ಪಟ್ಟಿದೆ. ಧರ್ಮವನ್ನು ಮರೆತಿದೆ. ದೇವರೆಂಬುದು ಇಲ್ಲವೇ ಇಲ್ಲ. ಎಂಬಷ್ಟು ಕೆಲವರು ಮುಂದುವರೆದು, ಭೋಗವೇ ದೇವರೆಂದು ತಮ್ಮ ಅಮೂಲ್ಯವಾದ ಆಯುಷ್ಯದ ಚಣವನ್ನೂ ಅದಕ್ಕೆ ವಿನಿಯೋಗಿಸುತ್ತಾರೆ. ಇವರಿಗೆ ಶಾಂತಿಯಿದೆಯೇ ? ತೃಪ್ತಿಯಿದೆಯೇ ? ಭಗವಾನ್ ವೇದವ್ಯಾಸರು 'ಭರತ ಸಾವಿತ್ರಿ' ಯಲ್ಲಿ ನುಡಿಯುತ್ತಾರೆ. "ಎಲೋ ಪ್ರಾಣಿಗಳಿರಾ, ನಾನು ಎರಡೂ ಕೈಗಳನ್ನು ಎತ್ತಿ ಸಾರಿ ಸಾರಿ ಹೇಳುತ್ತೇನೆ. ಇದಕ್ಕೆ ಒಬ್ಬನಾದರೂ ಕಿವಿಗೊಡುವುದಿಲ್ಲ. ಧರ್ಮವೊಂದನ್ನು ಹಿಡಿದರೆ ಅರ್ಥವೂ ಕಾಮವೂ ತಾನಾಗಿಯೇ ಹುಡುಕಿಕೊಂಡು ಬರುವುವು. ಅಂಥ ಧರ್ಮವನ್ನು ನೀವೇಕೆ ಆಶ್ರಯಿಸಲೊಲ್ಲಿರಿ ?" ಎಂದು.

ಧರ್ಮದಲ್ಲಿ ನಡೆಯಬೇಕಾದರೆ ಕಷ್ಟವಿಲ್ಲ: ಮನಸ್ಸಿಗೆ ಶಾಂತಿಯಿದೆ. ಧರ್ಮವೆಂಬುದು ಕ್ಷಣಭಂಗುರವಲ್ಲ. ಧರ್ಮದ ಆಶ್ರಯವೇ ಚಿಂತೆ ಕಳೆಯುವ ಸಾಧನ. ಎಷ್ಟೇ ನಿರಾಶೆಯಾಗಲಿ, ಕಷ್ಟಬರಲಿ–ಆಗ ದೇವರೊಬ್ಬ ತನ್ನ ಸಹಾಯಕ್ಕಿದ್ದಾನೆಂದು ತೋರಿದರೆ ಎಂಥ ಕಷ್ಟವನ್ನೂ ಎದುರಿಸುವ ಶಕ್ತಿ ಬರುವುದಿಲ್ಲವೇ ? ಕತ್ತಲೆಯಲ್ಲೂ ತಾಯೊಂದಿಗಿರುವ ಮಗುವಿಗೆ ಭಯವಿದೆಯೇ ? ಸ್ವಪ್ನದಲ್ಲಿ ಭಯವಾದರೂ ಮೃದುಹಸ್ತದಿಂದ ತಡಕಾಡಿ, ತಾಯ ಇರುವನ್ನು ನೆನೆದು ಧೈರ್ಯವಹಿಸಿಕೊಳ್ಳುವುದಿಲ್ಲವೇ ? ದಾರಿ ನಡೆಯುತ್ತಿದ್ದಾಗ ತನ್ನೊಂದಿಗೊಬ್ಬನಿದ್ದಾನೆಂಬ ನೆನಕೆಯಿದ್ದರೆ ಇಮ್ಮಡಿ ಧೈರ್ಯ ಉಂಟಾಗುವದಿಲ್ಲವೇ ? ಅಂತೆಯೇ ಸರ್ವಶಕ್ತನಾದವನು ಸಹಾಯಕೆ ಸದಾ ಇದ್ದಾನೆಂಬ ಎದೆ ನಮಗಿದ್ದರೆ ಅವ ಭಯವಿದೆ ? ಪುಟ್ಟ ಮಗುವೊಂದಕ್ಕೆ ತಂದೆ–ತಾಯಿ ದೇವರೆಂದೇ ಭಾಸವಾಗುತ್ತದೆ. ಅದರ ಸರ್ವೇಚ್ಛೆಗಳನ್ನು ಈಡೇರಿಸುವದರಿಂದ ಅವರು ದೇವರಾಗಿ ಕಾಣುತ್ತಾರೆ. ದಿನ ಕಳೆದಂತೆ ತನ್ನೆಲ್ಲಾ ಇಷ್ಟಾರ್ಥ ಈಡೇರಿಸಲು ಅಶಕ್ತರೆಂದು ತಿಳಿದು ಇದಕ್ಕೆ ಬೇರೊಬ್ಬನೇ ಬೇಕೆನಿಸುತ್ತವೆ. ಅದೇ ದೇವರು' ಎಂದಿದ್ದಾನೆ ಫ್ರಾಯ್ಡ್.

ದೇವರು ಸರ್ವಶಕ್ತನೆಂಬ ಭಾವನೆ ಬಂದರೆ ನಮಗಿರುವ ಚಿಂತೆ, ಭೀತಿಗಳೂ ಕಡಮೆಯಾದಂತೆ ಒಬ್ಬರು, 'ನಾನು ದಿನಾ ಗೀತೆಯನ್ನು ಓದುತ್ತೇನೆ, ನಾಲ್ಕಾರು ಅಷ್ಟೋತ್ತರಗಳನ್ನು ಪಠಿಸುತ್ತೇನೆ. ಆದರೂ ನನಗೆ ದಿನದಿಂದ ದಿನ ಕಷ್ಟಗಳು ಹೆಚ್ಚುತ್ತಲೇ ಹೋಗುತ್ತವೆ' ಎನ್ನುತ್ತಾರೆ. ಅವರು ಗೀತೆ ಓದುತ್ತಿರಬಹುದು; ಅಷ್ಟೋತ್ತರ ಪಠಿಸುತ್ತಿರಬಹುದು. ಆದರೆ ಒಂದು ದಿನವಾದರೂ ಶ್ರದ್ಧೆಯಿಟ್ಟು ಮಾಡಿದ್ದಾರೆಯೇ ? ಬೆಳಗ್ಗೆದ್ದು ಮಿಂದು, ಮೂಗು ಹಿಡಿದು ಅಷ್ಟೋತ್ತರ ಪಠಿಸಿದರಾಯಿತೇ? ಅದಕ್ಕೆ ಬೇರಾದುದು ಶ್ರದ್ಧೆ ಮಾತ್ರವೇ. ದಿನವಿಡೀ ದೇವರನಾಮ ಜಪಿಸುತ್ತ ಶ್ರದ್ಧೆಯಲ್ಲದೆ ಮಾಡಿದುದು ಯಾವ ಫಲವನ್ನು ಕೊಟ್ಟೀತು ? ಪ್ರಜ್ಞೆಯಿಟ್ಟು ಕ್ಷಣಕಾಲ ಮಾಡಿದ ಪ್ರಾರ್ಥನೆ ಎಷ್ಟು ಫಲಧಾಯಕವಾಯಿತು–ಎಂದು ಅಜಾಮಿಳನಿಗೆ ಮುಕ್ತಿ ದೊರಕಿದ ಕತೆಯಲ್ಲಿ ತಿಳಿಯುವದು.

ಎಲ್ಲವನ್ನೂ ಬಿಟ್ಟು ನನಗೇ ಶರಣು ಬಾ–ಎಂದು ಗೀತಾಚಾರ್ಯ ಶ್ರೀಕೃಷ್ಣ ಹೇಳಿದ್ದಾನೆ. ದ್ರೌಪತಿಯ ಸೀರೆ ಸೆಳೆಯುವಾಗ ಆಕೆ ಎಷ್ಟೇ ಆರ್ತನಾದ ಮಾಡಿದರೂ ಆತ ಬರಲಿಲ್ಲ, ಏಕೆ, ಆಕೆ ತನ್ನ ಕೈಯನ್ನು ಭದ್ರವಾಗಿ ಸೀರೆಯ ಗಂಟಿನಲ್ಲಿ ಹಿಡಿದಿದ್ದಳು. ಕೊನೆಗೆ ಗತಿಯಿಲ್ಲ ಎನ್ನುವಾಗ ಸೀರೆಯ ಗಂಟನ್ನು ಬಿಟ್ಟು ಎರಡೂ ಕೈಮುಗಿದು

ಪ್ರಾರ್ಥಿಸಿದಳು. ಆಗ ಶ್ರೀ ಕೃಷ್ಣ ಆಕೆಗೆ ಅಕ್ಷಯಾಂಬರ ಕರುಣಿಸಿದ. ಸ್ವಸಾಮರ್ಥ್ಯವಿರುವಾಗ ದೇವರು ಬರುವುದಿಲ್ಲ. ಗಂಜಿ ಮಾಡಲೂ ದೇವರೇ ಬರಲಿ ಅಂತ ತಾನು ಸೋಮಾರಿ ಮಾತ್ರ ಆಗಬಾರದು. ಶ್ರದ್ಧೆಭಕ್ತಿಯಿಂದ ಇಂಥ ಹಟವನ್ನು ಮಾಡಿದರೆ ದೇವರು ಗಂಜಿ ಬೇಯಿಸಿ ಕೊಡಲೇಬೇಕಾಗುತ್ತದೆಂಬುದು ಅಸಂಶಯ. ಕಬೀರನಿಗೆ ವಸ್ತ್ರ ನೇದು ಕೊಟ್ಟ ದೇವರಿಗೆ ಗಂಜಿ ಬೇಯಿಸಲು ಕಷ್ಟವಾದೀತೆ?.

ಸುಖದುಃಖವನ್ನು ಇಂಥ ಭಕ್ತರು ಯಾವಾಗಲೂ ಒಂದೇ ಎಂದು ನೆನೆಸುತ್ತಾರೆ. ನಾವಾದರೋ ಸುಖ ಬರುವಾಗ ಹಿಗ್ಗಿ, ದುಃಖ ಬಂದಾಗ ಕುಗ್ಗಿ ಇಲ್ಲದ ನಿರಾಶೆಯನ್ನುಂಟು ಮಾಡಿಕೊಳ್ಳುತ್ತೇವೆ. ಎಷ್ಟೇ ಸುಖ ಬರಲಿ, ದುಃಖ ಬರಲಿ–ಎಲ್ಲವೂ ನೀನೆ ಎಂಬ ಆತ್ಮಾರ್ಪಣ ಬುದ್ಧಿ ಅಗತ್ಯ. ಎಲ್ಲರ ದುಃಖ ತನ್ನ ದುಃಖ, ವೆಂಬ ವಿಶಾಲ ಮನೋಭಾವನೆ ಬೇಕು. ತಾನು ಭೋಗಿಸಿದುದಷ್ಟೇ ಬಂತೆಂಬ ಸ್ವಾರ್ಥಯಾವಾಗಲೂ ಮಾನವನಿಗೆ ಇರಬಾರದು. ಜೀವಜಂತುಗಳಲ್ಲಿ ಮನುಷ್ಯ ಜನ್ಮವೇ ಉತ್ತಮವೆಂದು ಎಲ್ಲರಿಗೂ ಗೊತ್ತಿದೆ. ಆದುದರಿಂದ ಅದರಲ್ಲಿ ನಮ್ರತನ ಇರುವುದರಿಂದ ಪರಪೀಡೆ ಮಾಡದಿರುವುದೇ ಶಾಂತಿ. 'ಇನ್ನು ಯಾವ ಕಷ್ಟ ಬಂದರೂ 'ಪರಮಾತ್ಮ' ಎಂದು ಮನವನ್ನು ಸ್ಥಿಮಿತದಲ್ಲಿರಿಸಿಕೊಳ್ಳಬೇಕು. ದಿನದ ಪ್ರಾತಃ ಕಾಲವನ್ನು ಎಂದೂ ಹಾಳು ನಿದ್ರೆಯಲ್ಲಿ ಕಳೆಯಬಾರದು. ಪ್ರಾತಃಕಾಲದಲ್ಲೇ ಎದ್ದು ಏನೂ ತಿಳಿಯದೆ ಹಕ್ಕಿ ಪಕ್ಷಿಗಳೂ ದೇವರ ಗಾನವನ್ನು ಇಂಪಾಗಿ ಹಾಡುವಂತೆ ನಾವೂ ಏಕೆ ಅವನ ಕೃಪೆಗೆ ಪಾತ್ರರಾಗಬಾರದು? ದೇವರ ಪ್ರಾರ್ಥನೆಯಿಂದ ಶರೀರದ ಜಡ ಮಾಯವಾಗುತ್ತದೆ. ಅದರಲ್ಲಿ ಶಾಂತಿಯಿದೆ. ಮಹಾತ್ಮಗಾಂಧೀಜಿ ಯಾವುದನ್ನು ಬಿಟ್ಟರೂ ತಮ್ಮ ಪ್ರಾರ್ಥನೆಯನ್ನು ಬಿಡಲಿಲ್ಲ. ಅವರ ಕೊನೆಯ ಘಳಿಗೆ ಕೂಡ ಪ್ರಾರ್ಥನೆಯಲ್ಲೇ ಇತ್ತು.

ಆದುದರಿಂದ ಯಾರೇ ಸರಿ, ಎಂಥ ಚಿಂತೆಯೇ ಬರಲಿ, ಅದರ ಬಗೆಗೆ ತಲೆಹಾಳುಮಾಡದೆ, ಸಕಲವನ್ನು ತಿಳಿದ ಸರ್ವಶಕ್ತ ಭಗವಂತನ ಮೊರೆ ಹೊಕ್ಕರೆ ನಮ್ಮ ಚಿಂತೆ, ಕಷ್ಟಗಳೆಲ್ಲ ಇದ್ದೂ ಇಲ್ಲದಂತಾಗುತ್ತವೆ. ಪರಮಾತ್ಮನ ದಿವ್ಯ ನಾಮವೇ ರಕ್ಷಾಕವಚ! ವಜ್ರಕವಚ! —

—ಟಿ. ಚಂದ್ರರಾಜ ಶೆಟ್ಟಿ ಸಿದ್ಧಕಟ್ಟೆ

---

ಈ ತಿಂಗಳ ವಿಶೇಷ :

1–6–1874 ಬ್ರಿಟಿಷರ ಈಸ್ಟ್ ಇಂಡಿಯಾ ಕಂಪೆನಿಯನ್ನು ವಿಸರ್ಜಿಸಲಾಯಿತು.

1–6–1852 ಭಾರತದಲ್ಲಿ ಮೊತ್ತಮೊದಲನೆಯ ಅಂಚೆ ಚೀಟುಹೊರಟದ್ದು.

3–6–1959 ಸುಮಾರು 140 ವರ್ಷಗಳ ವಸಾಹತು ಅಳ್ವಿಕೆಯ ತರುವಾಯ ಸಿಂಗಾಪುರವು ಸ್ವಾಡಳಿತೆಯನ್ನು ಪಡೆದುಸ್ವತಂತ್ರವಾಯಿತು.

5–6–1783 ಮೊದಲನೆಯ ಬಿಸಿಗಾಳಿಯ ಬಲೂನು ಆಕಾಶದಲ್ಲಿ ಹಾರಿಸಲ್ಪಟ್ಟಿತು.

18–6–1858 ಬ್ರಿಟಿಷರು ಝೂನ್ಸಿಯ ರಾಜ್ಯಕ್ಕಾಗಿ ಲಕ್ಷ್ಮೀಬಾಯಿಯೊಡನೆ ಹೋರಾಡಿ, ಯುದ್ಧದಲ್ಲಿ ಅವಳನ್ನು ಕೊಂದದ್ದು.

23–6–1757 ಪ್ಲಾಸಿಯ ಯುದ್ಧ.

23–6–1934 ಮೈಸೂರು ನಾಲ್ಮಡಿ ಕೃಷ್ಣರಾಜೇಂದ್ರ ಒಡೆಯರ ಸುವರ್ಣಮಹೋತ್ಸವ.

24–6–1947 ಅಮೇರಿಕದ ಕೆನಿತ್ ಅರ್ನೋಲ್ಡ್ ಎಂಬ ವೈಮಾನಿತನು ಯಾತಿಮಾ ಎಂಬಲ್ಲಿಗೆ ವಿಮಾನದಲ್ಲಿ ಹಾರುತ್ತಿರುವಾಗ ಆಕಾಶದಲ್ಲಿ ಬಟ್ಟಲಿನಾಕಾರದ ಏಳುತೇಜಪುಂಜಗಳು ಒಂದು ಗುಂಪಾಗಿ ಹಾರುವುದನ್ನು ಮೊದಲನೆಯದಾಗಿ ಕಂಡನು. ಅವುಗಂಟೆಗೆ 12,000 ಮೈಲುವೇಗದಲ್ಲಿ ಹಾರುತ್ತಿದ್ದವು.

25–6–1919 ಕನ್ನಡದ ಮೊದಲಿನ ಕಾದಂಬರಿಯಾದ 'ವಾಗ್ದೇವಿ' ಯ ಲೇಖಕರಾದ ಬೋಳಾರ ಬಾಬುರಾಯರ ನಿಧನ.

29–6–1757 ಬೆಂಗಳೂರಿನಲ್ಲಿರುವ ಮನಶ್ಶಾಸ್ತ್ರ ಸಂಶೋಧನಾಲಯದ ಸ್ಥಾಪನೆ.

30–6–1799 ಮೈಸೂರಿನ ಮುಮ್ಮಡಿ ಕೃಷ್ಣರಾಜೇಂದ್ರರ ಪಟ್ಟಾಭಿಷೇಕ.

30–6–1940 ಕನ್ನಡ ನಾಡಿನ ಹೆಮ್ಮೆಯ ಸಂಸ್ಥೆಯಾದ ಕನ್ನಡ ಸಾಹಿತ್ಯಪರಿಷತ್ತಿನ ಬೆಳ್ಳಿಯ ಹಬ್ಬ.



# ಕವಿ ಕುಲ ಗುರು ಕಾಳಿದಾಸನು ಚಿತ್ರಿಸಿದ ನಾರೀ ಸ್ವರೂಪ

## (ಕಿರು ವಿವೇಚನೆ)

—ಎಸ್. ಎಸ್. ಗದಗಕರ

ಮಹಾಕವಿ ಕಾಳಿದಾಸನು ತನ್ನ ಕಲಾಕೃತಿಗಳಲ್ಲಿ ಚಿತ್ರಿಸಿರುವ ಸ್ತ್ರೀಯನ್ನು ನಾವು ಉಪೇಕ್ಷಿಸಲಾರೆವು. ರಘುವಂಶ ಕಾವ್ಯದಲ್ಲಿ ಆರಂಭಕ್ಕೆ ಅವನು –

"ವಾಗರ್ಥಾವಿವ ಸಂಪೃಕ್ತೌ ವಾಗರ್ಥಪ್ರತಿಪತ್ತಯೆ |
ಜಗತಃ ಪಿತರೌ ವಂದೇ ಪಾರ್ವತೀ ಪರಮೇಶ್ವರೌ ||"

ಎಂದು ಸ್ತುತಿಸಿ ಮಹಿಳಾ ಲೋಕಕ್ಕೆ ಅಲೌಕಿಕ ಗೌರವ ಸಲ್ಲಿಸಿರುವನು. ಪಾರ್ವತಿ ಎಂದರೆ ಅಸಾಮಾನ್ಯಸ್ತ್ರೀ. ಆಕೆ ಜಗನ್ಮಾತೆ ಇಂತಹಳು ಶಿವನೊಡನೆ, ಲೇಖಕನಿಗೆ ಶಬ್ದಾರ್ಥ ಕಲ್ಪನೆ ತಂದು ಕೊಡುವಳೆಂದು ಭಾರತೀಯರ ಶ್ರದ್ಧೆ. ಅಂತೇ ಕಾವ್ಯಾರಂಭದಲ್ಲಿ ಸ್ತ್ರೀ ಶಕ್ತಿಯನ್ನು ಮಹಾಕವಿ ಅನುಪಮ ಶ್ರದ್ಧೆಯಿಂದ ಹೊಗಳಿರುವನು. ಈ ಪದ್ಯದಲ್ಲಿ ಕವಿ ಪಾರ್ವತೀದೇವಿಯನ್ನು ಬರಿ ವರ್ಣಿಸಿಲ್ಲ. ಆಕೆಯನ್ನು ಭಕ್ತಿಭಾವ ಪುರಸ್ಸರತೆಯಲ್ಲಿ ಅಭಿವಂದಿಸಿರುವನು. ಅಖಿಲ ಬ್ರಹ್ಮಾಂಡಕ್ಕೂ ಪಾರ್ವತಿ ತಾಯಿಯೆಂದು ಉಸುರಿರುವದು ಸ್ತ್ರೀಕುಲಕ್ಕೆ ಎಂತಹ ಮರ್ಯಾದೆ!

ದಿಲೀಪ ದೊರೆ ವಶಿಷ್ಠಾಶ್ರಮ ತಲುಪಿದ. ತಾನು ರಥದಿಂದ ಇಳಿಯುವ ಮೊದಲು ತನ್ನ ಪತ್ನಿಯನ್ನು ಆದರ ಪೂರ್ವಕವಾಗಿ ಇಳಿಸುವನು. ಆಕೆಯ ಬಗ್ಗೆ ರಾಜನ ಅಭಿಮಾನ, ಗೌರವ ಎಷ್ಟು ಇತ್ತೆಂಬದು ಮನನೀಯ ಅಂಶ.

"ಅಥ ಯಂತಾರಮಾದಿಶ್ಯ ಧುರ್ಯಾನ್ ವಿಶ್ರಾಮ
ಯೇತಿ ಸಃ|
ತಾಮವಾರೋಹಯತ್ ಪತ್ನೀಂ ರಥಾದವತತಾರ ಚ||"
ಎಂಬ ನುಡಿಯೇ ಆ ಅನುಪೇಕ್ಷಣ ಭಾವಕ್ಕೆ ಸಾಕ್ಷಿ.

ಮಕ್ಕಳಿಲ್ಲದ್ದರಿಂದ ದೊರೆಗೆ ಆದ ವ್ಯಥೆ ಅಷ್ಟಿಷ್ಟಲ್ಲ. ಎಲ್ಲ ಸುಖ ಸಂಪತ್ತು ರಾಜ್ಯ ಅವನ ಪಾಲಿಗೆ ವ್ಯರ್ಥ. ವಜ್ರ ವೈಡೂರ್ಯ ಎಷ್ಟಿದ್ದರೇನು? ಪುತ್ರ ಸೌಖ್ಯಕ್ಕೆ ಅವುಮಿಗಿಲೆನಿಸವು. ಸಂತಾನ ಇಲ್ಲವೆಂದು ದಿಲೀಪನ ಜೀವನ ಅಂಧಕಾರಮಯವಾಗಿದೆ. ರಾಜ್ಯಕ್ಕೆ ಅದೊಂದು ಮಹಾ ಕೊರತೆ. ಈ ಪರಿಸ್ಥಿತಿಯನ್ನು ಹೋಗಲಾಡಿಸಲೋಸುಗ ಕುಲಪುರೋಹಿತ ವಶಿಷ್ಠರು ದೇವತಾ ಸ್ವರೂಪಿ ಧೇನು ನಂದಿನಿಯನ್ನು ಭಕ್ತಿಯಿಂದ ಆರಾಧಿಸು ಎಂದು ಸೂಚಿಸುವರು. ದೊರೆ ತಾನು ಆರಾಧಿಸುವವಲ್ಲದೆ ತನ್ನ ಪತ್ನಿ ಸುದಕ್ಷಿಣೆಗೂ ಸೇವೆಯಲ್ಲಿ ನಿರತಳಾಗಲು ನಿಯಮಿಸುವನು.

"ಪ್ರಸ್ಥಿತಾಯಾಂ ಪ್ರತಿಷ್ಠೇಥಾಃ ಸ್ಥಿತಾಯಾಂಸ್ಥಿತಿ
ಮಾಚರೇಃ |
ನಿಷಣ್ಣಾಯಾಂ ನಿಷೆದಾಸ್ಯಾಂ ಪೀತಾಂಭಸಿ ಪಿಬೇರಪಃ||,"

ಎಂಬ ಮುನಿಯ ಹೇಳಿಕೆಯ ಮೇರೆಗೆ ಸುದಕ್ಷಿಣಾದೇವಿ ನಂದಿನಿಯನ್ನು ಹಿಂಬಾಲಿಸಿದಳು. ಅದು ಕುಳಿತರೆ ತಾನು ಕೂಡ್ರುವಳು. ನಿಂತರೆ ನಿಲ್ಲುವಳು. ಹೊರಟರೆ ಹೊರಡುವಳು. ಅದು ನೀರು ಕುಡಿಯುವವರೆಗೆ ತಾನು ಕುಡಿಯುತ್ತಿದ್ದಿಲ್ಲ. ಎಂಥ ನಿಷ್ಠೆ! ಪತಿಯಂತೆ ಪತ್ನಿಯೂ ಗೋಸೇವೆಯಲ್ಲಿ ಮಗ್ನಳಾದಳು - ಎಂದು ಕವಿ ಉಸುರುವಲ್ಲಿ ಸಮಾನಾಧಿಕಾರ ವ್ಯಕ್ತವಾಗುವುದು. ಬರಿ ಈ ಕಾರ್ಯ ಅರಮನೆಯಲ್ಲಿ ನಡೆಯದೆ ನಂದಿನಿ ಅರಣ್ಯಕ್ಕೆ ಹೋಗಲು ಅಲ್ಲಿಗೇ ಪತಿ ಪತ್ನಿಯರು ಹೊರಟರು. ಮುಂಜಾವುನಸುಕಿನಲ್ಲಿ ದೇವಿ ಆಕಳಿಗೆ ಗಂಧಮಾಲ್ಯದ ಅಲಂಕಾರ ಸಲ್ಲಿಸುವಳು. ನಮಸ್ಕರಿಸಿ ಅದನ್ನು ಹಿಂಬಾಲಿಸುವಳು. ಆ ಧರ್ಮಪತ್ನಿ ಪತಿಯನ್ನು ಹಿಂಬಾಲಿಸಿ ಹೊರಟಾಗ ಕವಿ-

"ಶ್ರುತೇರಿವಾರ್ಥಂ ಸ್ಮೃತಿರನ್ವಗಚ್ಛತ್"

ಎಂದು ಭಾವಪೂರ್ಣವಾಗಿ ಬಣ್ಣಿಸುವನು. ಪ್ರಾತ: ಕಾಲದಿಂದ ಸಾಯಂಕಾಲದವರೆಗೂ ದೇವಿಗೆ ಧೇನುವಿನ ಚಿಂತೆಯೇ ಚಿಂತೆ—ಎಂಬಲ್ಲಿ ಕವಿಯ ಚಿತ್ರಣ ಕೌಶಲ ನಮಗೆ, ಹೊಳೆಯುವುದು. ನಂದಿನಿಯನ್ನು ತನ್ನ ಕಣ್ಣಿನಿಂದ ಆಕೆ ಕುಡಿದು ಬೀಳುವಳೇನೊ ಎನಿಸುತ್ತಿತ್ತು. ಎಂಥ ಕಾವ್ಯ

ವಿಲಾಸ! ದೇವಾಲಯವೆಂದು ತಿಳಿದು ಅಲ್ಲಿ ಪ್ರದಕ್ಷಿಣೆ ಹಾಕುವದೂ ಸರಿಯೆ!

ಕುಮಾರಸಂಭವ ಈ ಮಹಾಕವಿಯ ಬೇರೊಂದು ಕಲಾಕೃತಿ. ಅಲ್ಲಿ ಕೂಡ ಹೆಜ್ಜೆ ಹೆಜ್ಜೆಗೆ ಸರಸವಾದ ನಾರೀ ಚಿತ್ರಣ ಕಣ್ಮುಟ್ಟುವದು. ಭಾರತೀಯ ಕಾವ್ಯಗಳಲ್ಲಿ ಮಹಿಳೆಯ ಪಾತ್ರ ಎಷ್ಟೊಂದು ಉದಾತ್ತ ಎಂಬದು ಇಲ್ಲಿಯ ಪಾರ್ವತಿಯ ವರ್ಣನೆಯಲ್ಲಿ ನಮಗೆ ಗೋಚರಿಸುವುದು.

ಬಾಲಿಕೆ ಇದ್ದಾಗ, ತರುಣಿ ಆದಾಗ, ಆ ಪಾರ್ವತಿ ಮಹರ್ಷಿಗಣಕ್ಕೆ ಆದರ ಪ್ರಾಯಳಾಗಿದ್ದಳು. ಆದರ್ಶ ಎನಿಸಿದ್ದಳು. ಆಕೆಯದು ಮಾನುಷೀ ರೂಪವೇ ಅಲ್ಲ. ದೇವಿಯೇ ಆಕೆ ಅವರ ಪಾಲಿಗೆ !

ಪಾರ್ವತಿಯು ತಪ್ಪಸ್ಸನ್ನಾಚರಿಸುವಾಗ ಕವಿಯು ಆಕೆಯನ್ನು ಸೂಕ್ಷ್ಮವಾಗಿ ಚಿತ್ರಿಸುವನು. ಪರಪುರುಷನನ್ನಾಕೆ ಕಣ್ಣೆತ್ತಿ ನೋಡಳು. ಆಕೆಯನ್ನು ಪರೀಕ್ಷಿಸಲು ಪರಶಿವನೇ ಬ್ರಹ್ಮಚಾರಿಯಾಗಿ ಬಂದು ತಪಸ್ಸಿನ ಕಾರಣ ಕೇಳಿದನು. ಪಾರ್ವತಿ ಉತ್ತರಿಸಲಿಲ್ಲ, ಸಖೀಜನರೇ ಆಕೆಯ ಪರವಾಗಿ ಹೇಳಿದರು. ವೇಷಧಾರಿ ವ್ಯಕ್ತಿ ಆಕೆಯ ಆರಾಧ್ಯ ದೇವ ಶಿವನನ್ನು ಪರಿಪರಿಯಾಗಿ ನಿಂದಿಸುವದು. ಆಕೆಯ ಅಂತರಂಗ ಅರಿಯಲು ತವಕಿಸಿತು. ಎಷ್ಟು ನಿಂದಿಸಿದರೂ ಆಕೆ ಅನಾರ್ಯಳಂತೆ ನಡೆಯಲಿಲ್ಲ. ಸಿಟ್ಟು ಬಂದರೂ ನುಂಗಿಕೊಂಡಳು !

"ನಿವಾರ್ಯತಾಮಾಲಿ ಕಿಮಪ್ಯಯಂ ಬಟುಃ ಪುನ
ರ್ವಿವಕ್ಷುಃ ಸ್ಫುರಿತೋತ್ತರಾಧರಃ |
ನಕೇವಲಂ ಯೋ ಮಹತೋಪಭಾಷತೇ ಶೃಣೋತಿ
ತಸ್ಮಾದಪಿಯಃ ಸ ಪಾಪಭಾಕ್ ||"

ಎಂಬ ಶ್ಲೋಕದ ಆಶಯದಂತೆ ಎಂಥ ಪಾಪದ ಮಾತು ಕೇಳಿದರೂ ಪಾರ್ವತಿ ಮೌನ ಆಗಿದ್ದ ಭಾರತೀಯ ದಿವ್ಯ ಪರಂಪರೆಯ ಪ್ರತ್ಯೇಕ ಆಕೆ !

ತನ್ನ ಕಾಲಕ್ಕೆ ಸ್ತ್ರೀಯ ಸಾಮಾಜಿಕ ಸ್ಥಿತಿ ಎಂತಹದಿತ್ತೆಂಬುದನ್ನು ಕವಿ ಮೇಘದೂತ ಕಾವ್ಯದಲ್ಲಿ ಸುಸ್ಪಷ್ಟವಾಗಿ ನಿವೇದಿಸುವನು. ಯಕ್ಷನು ತನ್ನ ಪತ್ನಿಯನ್ನು ಬಣ್ಣಿಸುವ ರೀತಿಯನ್ನು ನಿರುಕಿಸಿರಿ—

"ಆಲೋಕೇತೇ ನಿಪತತಿ ಪುರಾ ಸಾ ಬಲಿವ್ಯಾಕುಲಾವಾ
ಮತ್ಸಾದೃಶ್ಯಂ ವಿರಹತನುವಾ ಭಾವಗಮ್ಯಂ ಲಿಖಂತೀ ||
ಪೃಚ್ಛಂತೀವಾ ಮಧುರವಾಚನಾಂ ಸಾರಿಕಾಂ
ಪಂಜರಸ್ಥಾಲ |
ಕಚ್ಚಿದ್ ಭರ್ತುಃ ಸ್ಮರಸಿ ರಸಿಕೆ ತ್ವಂ ಹಿತಸ್ಯಪ್ರಿಯೇತಿ||"

ಒಮ್ಮೊಮ್ಮೆ ಆಕೆ ಪತಿಯ ಚಿತ್ರಬರೆಯುತ್ತಲೊ, ಪಕ್ಷಿಗಳಿಗೆ ಕಾಳು ಕಡಿ ಹಾಕುತ್ತಲೂ, ಸಾಕಿದ ಸಾರಿಕೆಯೊಡನೆ ಮಾತಾಡುತ್ತಲೊ ಕಾಲ ಕಳೆಯುತ್ತಿರುವಳು. ಎಲ್ಲವನ್ನು ಮೀರಿಮಿಕ್ಕಿಸುವಂತೆ ವಿರಹವ್ಯಥೆ ಆಕೆಯ ಮನವನ್ನಾವರಿಸಿದೆ. ಅಂತೇ ಆಕೆಗಾಗಿ ಕವಿ ಕರುಣೆಯ ಹೊನಲನ್ನೇ ಹರಿಸುವನು. ಅದು ಕೋಡಿಯನ್ನು ಕೊಚ್ಚಿಕೊಂಡು ಪ್ರವಹಿಸುವದು.

"ಮದ್‌ಗೋತ್ರಾಂಕಂ ವಿರಚಿತಪದಂ ಗೇಯಮು
ದ್ಗಾತುಕಾಮಾ |
ಭೂಯೋ ಭೂಯಃ ಸ್ವಯಮಪಿ ಪುನಃ
ಮೂರ್ಛನಾಂ ವಿಸ್ಮರಂತೀ ||"

ಈ ಪದ್ಯದಲ್ಲಿಯಂತೂ ಆಗಿನ ಯುವತಿಯರು ಸಂಗೀತ ವಿದ್ಯೆಯಲ್ಲಿ ಪರಿಣತರಾದ ವಿದುಷಿಯರಾಗಿದ್ದರೆಂಬುದು ಸ್ಪಷ್ಟವಾಗಿ ಕಂಡು ಬರುವುದು. ಬರಿಹಾಡುಗಾರಿಕೆಯಲ್ಲಿ ಅಲ್ಲ; ಸ್ವಯಂ ಪದ್ಯರಚನೆ ಮಾಡುತ್ತಿದ್ದರೆಂದ ಮೇಲೆ ಆ ಪಾಂಡಿತ್ಯ ಸಂಸ್ಕಾರ ಗಮನಾರ್ಹವೇ !

ಈ ಕಾವ್ಯದಲ್ಲಿ ನಾರಿಯ ಚಿತ್ರಣ ಬಹುಮುಖವಾಗಿದೆ. ಆಕೆ ಪತಿಗೆ ಬಡದಾಸಿಯಂತೂ ಮೊದಲಲ್ಲ. ಆದರೆ ಗೃಹಿಣಿ, ಅಂದರೆ ವ.ನೆತನದ ವ್ಯವಹಾರ ನಡಿಸುವ ಕುಶಲಳು. ಹೊಣೆಗಾರಳು. . ಆಳು ಹೋಳುಗಳಿಗೆ ಆಜ್ಞೆ, ಮಾಡುವಷ್ಟರ ಮಟ್ಟಿಗೆ ಅಲ್ಲ. ಆದರೆ ಪತಿಗೆ ಯುಕ್ತಕಾಲದಲ್ಲಿ ಸಲಹೆ ಸೂಚನೆ ಮಾಡುವ ಮಹಿಳಾಮಣಿ. ಅಂದಮೇಲೆ ಆಕೆಯ ಸದಸದ್ವಿವೇಕ ಬುದ್ಧಿ ಎಷ್ಟು ಉಜ್ವಲವಿರಬೇಡ! ಬುದ್ಧಿಮತ್ತೆಯಲ್ಲಿ ಪತಿಗೆ ಸರಿದೊರೆ ಎಂಬ ಪ್ರಗಲ್ಭ ವಿಚಾರ ಇಲ್ಲಿ ಮೊಳಗುವದು. ಜಟಿಲ ಸಮಸ್ಯೆ ಬಂದಾಗ ಆಕೆ ಪತಿಗೆ ಪರಿಹಾರ ಸೂಚಿತ್ತಿದ್ದಳಂತೆ! ಅಲ್ಲದೆ "ಪ್ರಿಯ ಶಿಷ್ಯಾ ಲಲಿತೆ ಕಲಾವಿಧೌ" ಎಂಬ ಪ್ರೌಢಿಮೆ ಬೇರೆ. ಅಂದರೆ ಕಲಾಭಿಜ್ಞತೆ ಆಕೆಯ ಸಾಮಾಜಿಕ ವ್ಯಕ್ತಿತ್ವದ ಒಂದು ಮುಖವಾಗಿತ್ತು ಎಂಬ ಭಾವ.



ಪ್ರಜಾಕೋಟಿಯ ಹಿತವೇ ಶ್ರೀರಾಮಚಂದ್ರನ ಕಣ್ಣಲ್ಲಿ ಸದೈವಗೋಚರಿಸುತ್ತಿತ್ತು. ಅಂತೇ ಗರ್ಭವತಿಯಾದ ತನ್ನ ಪತ್ನಿಯನ್ನು ಅವನು ಬಿಟ್ಟುಕೊಟ್ಟ. ಇಂತಹ ಕೃತಿ ಯಾವ ಮಹಿಳೆಗೆ ಸರಿ ಕಂಡೀತು ? ಆಕೆ ಪ್ರತಿಭಟಿಸಿಯೇ ತೀರುತ್ತಿದ್ದಳು. ಆದರೆ ಸೀತಾದೇವಿ ಹಾಗಲ್ಲ. ಕ್ಷಮೆಯಲ್ಲಿ ಪೃಥ್ವಿಗೇ ಸರಿ. ಪತಿಪರಾಯಣಳು. ಪತಿಯಲ್ಲಿ ಏನು ತಪ್ಪು ? ಅವ ಲೋಕ ಕಲ್ಯಾಣನು. ತನ್ನದೇ ಪೂರ್ವಜನ್ಮದ ದ ಷ್ಕೃತಿ ಕಾರಣ ಅಂದುಕೊಳ್ಳುವಳು. ಮುಂದಿನ ಜನ್ಮದಲ್ಲಿಯೂ ಆ ಶ್ರೀ ರಾಮನೇ ತನಗೆ ಪತಿಯಾಗಿ ದೊರೆಯಲಿ ಎಂಬ ಹಾರೈಕೆ ಬೇರೆ. ಕಾಳಿದಾಸನ ಕಾ ಲ ದ 'ಮಹಿಳೆಯ ತ್ಯಾಗಕ್ಕೆ ಸೀಮೆಯುಂಟೆ? ಸೀತಾದೇವಿಯ ಈ ಎಲ್ಲ ಉದ್ಗಾರಗಳು ವಿಶ್ವಕೆ ವಿಸ್ಮಯಕಾರಿ ಅನಿಸುವಲ್ಲಿ ಸಂದೇಹವಿಲ್ಲ.

"ಸಾಹಂ ತಪಃ ಸೂರ್ಯನಿವಿಷ್ಟದೃಷ್ಟಿರೂರ್ಧ್ವಂ
ಪ್ರಸೂತೇ ಶ್ಚರಿತುಂ ಯತಿಷ್ಯೆ |
ಭೂಯೋ ಯಥಾ ಮೇ ಜನನಾಂತರೇವ ತ್ವಮೇವ
ಭರ್ತಾ ನಚ ವಿಪ್ರಯೋಗಃ ||

ಪತಿಯನ್ನು ಶಪಿಸುವ ಬದಲು ತಪಸ್ಸನ್ನಾಚರಿಸಿ ಆ ಸೀತಾದೇವಿ ಮುಂದಿನ ಜನ್ಮದಲ್ಲಿಯೂ ಆ ಶ್ರೀ ರಾಮಚಂದ್ರನಿಂದ ಅಗಲದಂತೆ ಕರುಣೆ ಉಂಟಾಗಲಿ ಎಂದು ಹಂಬಲಿಸುವಳು, ಎಂತಹ ಅಸದೃಶ ಸಹನ ಶೀಲತೆ ಕಲ್ಯಾಣ ಗುಣ !

ಕವಿಯ ಇನ್ನೊಂದು ಕಲಾಕೃತಿ ಶಾಕುಂತಲಾ ನಾಟಕ. ಅದು ನಿಜಕ್ಕೂ ಮೇರು ಕೃತಿ. ಅಲ್ಲಿ ಕೂಡ ಸ್ತ್ರೀತ್ವದ ಪಾವಿತ್ರ ಗಾಂಭೀರ್ಯ ಕಂಡುಬರುವುದು. ಕವಿಯ ಸಜೀವ ಪಾತ್ರ ಸೃಷ್ಟಿಗೆ ಶಕುಂತಲೆ ಮಾದರಿ.

ಶಕುಂತಲೆ ಲಾವಣ್ಯವತಿ, ಸ್ವಭಾವ ಮುಗ್ಧ ಮನೋಹರ ದುಷ್ಯಂತನು ಆಕೆಯನ್ನು ಪ್ರಥಮ ಸಂದರ್ಶನದಲ್ಲಿಯೇ ಪ್ರೀತಿಸುವನು. ಅನಂತರ ಶಾಪದ ಮೂಲಕ ಮರೆತಾಗ ಆಕೆ ಸಾಧ್ವಿಯಂತೆ ನಡೆದುಕೊಳ್ಳುವಳು. ತನ್ನನ್ನು ರಾಜನು ಲಗ್ನವಾಗಿರುವನೆಂದು-ಗಾಂಧರ್ವ ರೀತಿಯಿಂದ—ನೆನಪು ಮಾಡಿಕೊಡಲು ಯತ್ನಿಸುವಳು. ಎಲ್ಲ ವ್ಯರ್ಥವಾಯಿತು. ಅವನು ಪ್ರೇಮದ ಸಾಂಕೇತವೆಂದು ಕೊಟ್ಟ ಉಂಗುರ ಶಚಿತೀರ್ಥದಲ್ಲಿ ಸ್ನಾನಮಾಡುವಾಗ ಕಳಚಿಬೀಳಬೇಕೆ ? ಏನಿದ್ದರೂ ಔಚಿತ್ಯದ ಪ್ರಜ್ಞೆ ಮೀರಿ ನುಡಿಯುವದಿಲ್ಲ—ಆಕೆ.

"ಯಾಸ್ಯತ್ಯದ್ಯ ಶಕುಂತಲೇತಿ ಹೃದಯಂ ಸಂಸ್ಪ್ರಷ್ಟಲ
ಮುತ್ಕಂಠಯಾ"

—ಎಂಬ ಒಂದು ಪಂಕ್ತಿಯಿಂದಲೇ ಸಾಕು, ಸಾಕು ಮಗಳ ಮೇಲೆ ಕಶ್ಯಪರಿಗೆ-ನೈಜ ಮಗಳ ಮೇಲೆ ಇರುವಂತೆ— ಪ್ರೇಮ ಉಕ್ಕಿ ಬಂದುದನ್ನು ನಾವು ನಿರೀಕ್ಷಿಸುವೆವು.

"ಯಯಾತ್ನೇರಿವ ಶರ್ಮಿಷ್ಠಾ ಭರ್ತುರ್ಬಹುಮತಾಭವ"

ಎಂಬ ಆಶೀರ್ವಾದ ಕೇವಲ ಭಾರತೀಯ ಪರಂಪರೆಯೇ !

"ಪಾತುಂ ನ ಪ್ರಥಮಂ ವ್ಯವಸ್ಯತಿ ಜಲಂ ಯುಷ್ಮಾಸ್ವಪೇ
ತೇಸ್ವಯಾ
ನಾದತ್ತೇ ಪ್ರಿಯ ಮಂಡನಾಪಿ ಭವತಾಂ ಸ್ನೇಹೇನ ಯಾ
ಪಲ್ಲವಂ !"

ಎಂಬ ನುಡಿಯಲ್ಲಿಯಂತೂ ಶಕುಂತಲೆಯ ನಿಸರ್ಗ ಪ್ರೇಮ ಉತ್ಕಟವಾಗಿ ವ್ಯಕ್ತವಾಗಿರುವದು. ವೃಕ್ಷರಾಜಿಗೆ ನೀರು ಉಣಿಸದೆ ಆಕೆ ಕುಡಿಯುತ್ತಿರಲಿಲ್ಲ. ಹೂ ಚಿಗುರೆಲೆಗಳಿಂದ ಆಕೆ ಅಲಂಕರಿಸಿಕೊಳ್ಳುತ್ತಿರಲಿಲ್ಲ. ಗಿಡದಿಂದ ಅವನ್ನು ಅಗಲಿಸುತ್ತಿರಲಿಲ್ಲ. ಹೀಗೆ ಕಾವ್ಯ ನಾಟಕಗಳಲ್ಲಿ ಕಾಲಿದಾಸನು ಭಾರತೀಯ ಪರಂಪರೆಯಲ್ಲಿ ನಾರಿಯನ್ನು ಚಿತ್ರಿಸಿರುವದು ನಮಗೆ ಹೊಳೆಯುವದು. ಆ ಕೌಶಲ್ಯ ಕೂಡ ಅಲೌಕಿಕವೇ ನಿಜಕ್ಕೂ ಕಾಲಿದಾಸ ವರ್ಡ್ಸ್‌ವರ್ಥನಂತೆ High Priest of Nature—

---

## ಮಂತ್ರಿಗಳ ವಿರಸ

ಹಣಕಾಸು ಆಹಾರ ಮಂತ್ರಿಗಳ ವಿರಸ
ಕಾಳು ಬೇಳೆಯ ಮಾರುವವರಿಗೆ ಸರಸ
ಗಂಡ ಹೆಂಡತಿ ಮಧ್ಯೆ ಕೂಸು ಸಿಕ್ಕಂತೆ
ಅಗ್ಗದರ ಕಾಣಿಸದು ಜನ ಕುರುಡರಂತೆ

—ಕೆ. ವಿರೂಪಾಕ್ಷಗೌಡ

## ಕಾ ವ್ಯ ವಾ ಹಿ ನಿ



### ಚ ಕ್ರ

—ವೇಣುಗೋಪಾಲ ಸೊರಬ

ದಿನದಿನವೂ ಹಾಸಿಗೆಯಿಂದೇಳುವುದು ಹುಟ್ಟಿನಷ್ಟೇ ಕಷ್ಟ
ಬೇಕಾದ್ದ ಬೇಡಾದ್ದ ಮೈಮೇಲೆ ಹಾಕಿಕೊಂಡು
ಬೇಡವೆಂದರೂ ಬೆನ್ನಟ್ಟುವ ಬೇಜಾವಾಬ್ದಾರಿ ಸ್ನೇಹಿತರ
ಹಾಜರಿ
ಹೆಂಡತಿಯ ಕಿರಿಕಿರಿ ಬೀರು ಕನ್ನಡಿ ಹಿಂದೆ ಅಣಿಮಾಡಿಟ್ಟ
ತಿಂಡಿಯುವೈಖರಿ.
ಕ್ಷಣಾರ್ಧವೂ ನಿಶ್ಶಬ್ದವಾಗಿರದ ಮಂಡೋದರಿ ಮಳೆಗೆ
ಹಾತೊರೆಯುವಂತೆ
ಶಬ್ದಿಸುವ ಬೆರಳಚ್ಚಿನ ಯಂತ್ರಕಿಂತಲೂ ನಾಲ್ಕು ಪಡಿ
ಮೀರಿ
ನುಡಿವ ನಾಚಡೆಯೆ ಮೈಮೇಲೆ ಬಿದ್ದರೂ ಒದ್ದಾಡ
ದಂತೆ ನಿಭಾಯಿಸುವ
ಸಹ ನವಕರಿಣಿಯರ ನಡುವೆ ಮ್ಯಾನೇಜರನ ದಂಥೆಗೆ
ರೇಗಿ. ಸಂಬಳ ಎಣಿಸುವ.
ಕೈಯಿಗೂ ಕಾಲಿಗೂ ಹಿಡಿದು ಕಟ್ಟಿದಂತೆ ತಡಕುತ್ತಿರುವ
ಮಕ್ಕಳಿಗೆ
ಬಾಲು ಬ್ಯಾಟು ಬ್ಯಾಡಾಮಿಂಟನ್ ರ್‍ಯಾಕೆಟ್ ಪಾಲಿ–
ಪಾಪ್ ಐಸ್‌ಕ್ರೀಮ್ ಜಾಮೂನುಗಳಿಗೆ
ತಿಂಗಳಿನ ದಿನಸಿ ಸಾಮಾನುಗಳಿಗೆ ಬ್ಯಾಂಕಿನವರೇ
ಸಂಸಾರ ನಡೆಸಿಕೊಟ್ಟಿದ್ದರೆ
ಎಂದು ಲೊಚುಗುಟ್ಟುತ್ತ ಹಳ್ಳಿಗಳಿಗೆ ಮ್ಯಾನೇರಾಗಿ
ಹೋಗುತ್ತೀರಾ ? ಎಂದು ಬೆದರಿಸಿದ ದುಃಸ್ವಪ್ನ
ಡಿ-ವೈನ್‌ಲೈಫ್ ಸೊಸೈಟಿಯೊ ಬಾಲಾಶ್ರಮದ ಕನ್ಯಾ
ಮಣಿಗಳ ಸಾಂಸ್ಕೃತಿಕ ಕಾರ್ಯವೊ
ಸಮಾಜಸೇವೆಯ ಗುಂಡಿ ಅಗೆಯುವುದೊ ಹಳ್ಳಹರಿಬಿಡು
ವುದೊ ಬಾವಿಕಟ್ಟಿಸುವುದೊ
ಸನಿಕೆ ಗುದ್ದಲಿ ಹಿಡಿದು ಬಾಚಿಹಲ್ಲುಗಳನ್ನು ಹೊರಗೆಳೆದು
ಮಾನ್ಯ ಮಹಾಧ್ಯಕ್ಷನತರಹ
ಚಿತ್ರ ಹಿಂಸೆಗೊಳಗಾಗಿ ಚಿತ್ರಾರ್ಪಿತರಾದ ಚಿತ್ರಾಂಗ
ಚಿತ್ರಾಂಗಿಯರ ಕಂಡು ಒಳಗೇ ಕೊರಗು.
ಯಾವುದೂ ಬೇಕೆನಿಸಿ ಮಾಡಿದ್ದಲ್ಲ ಏನು ಮಾಡ
ಬೇಕೆಂಬುದೂ ತೋಚುತ್ತಿಲ್ಲ
ರಜಾ ಮಾರಿ ಕೊಂಡ ವಿಷಯ ಹಣದ ಕೊರತೆಗಲ್ಲ ರಜ
ದಲ್ಲಿ ಮಾಡಲೇನಿಲ್ಲ
ಎನ್ನುವ ಬೇಗುದಿಯು ಬೇಗಾದಿಯು ಹೆದರಿಕೆಗೆ ವೈಫಲ್ಯದ
ಅಳುಕಿಗೆ
ಹಲ್ಲುಗಾಲಿಯ ಚಕ್ರದಾಘಾತಕ್ಕೆ ಸಿಕ್ಕಿ ಬೊಚ್ಚು
ಬಾಯಾದರೂ ಬಾಯಿ ತುಂಬ ಹಲ್ಲು. —

### ನ ವ್ಯ

—ಆರ್. ಸದಾನಂದ

ಅರ್ಥದ ಅನ್ವೇಷಣೆ
ವ್ಯರ್ಥದ ಪರಿಧಿಯ
ಸುತ್ತ
ಫಲ ಶೂನ್ಯ
ಚಕ್ರ ಭ್ರಮಣ
ಕ್ರಿಯೆ
ಸ್ಥಗಿತ
ಕವನ
ಕಗ್ಗಂಟು
ಮನಸೆಲ್ಲ
ಭಣಭಣ
ನನಗೆನಿಸುತ್ತದೆ

ಈ ಕಾರ್ಖಾನೆಯವರು
ಹೀಗೇಕೆ
ಸರಳ ಸುತ್ತಿದ ದಾರದ
ರೀಲುಗಳ
ಬದಲು
ಗೋಜಲು ಗೋಜಲು ಬರೀ
ಗೊಂದಲ
ಬಿಡಿಸಲಾಗದ ಕಗ್ಗಂಟು
ದಾರವನ್ನೆ ತಯಾರಿಸು
ತ್ತಿದಾರೆ
ಅಂತ ? —



# ಸಾಮಾನ್ಯ ಜನರ ಬಾಳಿನಲ್ಲಿ.... ಧರ್ಮದ ಅಳವಡಿಕೆ ಹೇಗೆ?

—ಹೆಚ್. ಜಿ. ರಾಧಾದೇವಿ

ಧರ್ಮರಾಯ, ನಳ, ಹರಿಶ್ಚಂದ್ರ, ವಿಕ್ರಮಾರ್ಕ, ಶಿಬಿ ಮುಂತಾದ ರಾಜರ ಕಥೆಗಳನ್ನು ಓದಿದಾಗ ನಮಗೇನನಿಸುತ್ತದೆ. ? ಧರ್ಮಕ್ಕಾಗಿ, ಸತ್ಯಕ್ಕಾಗಿ ಅವರು ಹೋರಾಡಿದರು. ಅದನ್ನು ರಕ್ಷಿಸಿದರು, ಜೊತೆಗೆ ಅದರಿಂದ ತಾವು ರಕ್ಷಿತರಾಗಿ ಸ್ವರ್ಗಾದಿ ಲೋಕಗಳನ್ನು ಪಡೆದು ಇಹಪರಗಳನ್ನೂ ಗೆದ್ದರು.

ಇದನ್ನು ಓದಿ; ಅರಿತು ಅಷ್ಟಕ್ಕೆ ಸುಮ್ಮನಾಗುತ್ತೇವೆ. ಕಾರಣ ಅವರೆಲ್ಲ ಮಹಾತ್ಮರು. ಅವತಾರ ಪುರುಷರು, ಪ್ರಸಿದ್ಧರು ಜನ ಸಾಮಾನ್ಯರಾದ ನಮಗೆಲ್ಲಿ ಧರ್ಮ ಸತ್ಯದ ಗೊಡವೆ.

ಬಾಳಿನ ವಿವಿಧ ಬಗೆಯ ಸಂಕಷ್ಟಗಳ ಸಂಕೋಲೆಯಲ್ಲಿ ಮೈಮರೆತ-ಬಿಗಿಯಲ್ಪಟ್ಟಿರುವ ನಮಗೆ ಇಂಥಾ ರೀತಿಯಲ್ಲಿ ಧರ್ಮ, ಸತ್ಯ ಪರಿಪಾಲಿಸಲೂ ಸಾಧ್ಯವೆ? ಸದ್ಯ! ಬಯಸಿದ ಸಾಮಾನ್ಯ ಆಶೋತ್ತರ ಕೈಗೂಡಿ ಸುಖವಾಗಿ ಬಧುಕಿದರೆ ಸಾಕು. ಧರ್ಮ, ದಾನ, ಸತ್ಯಗಳ ವ್ರತ ಪಾಲಿಸಿಕೊಂಡು ಈ ಕಾಲದಲ್ಲೂ ಬಾಳಲು ಸಾಧ್ಯವೆ ?

ಇದು ಶೇ. 90 ಜನ ಶ್ರೀಸಾಮಾನ್ಯರ ಭಾವನೆ. ಈ ಭಾವನೆ ಮಾಯವಾಗಬೇಕೆಂದು ನನ್ನ ಅನಿಸಿಕೆ. ಸಾಮಾನ್ಯ ಜನರ ಬದುಕಿನಲ್ಲಿಯೂ, ಅವರ ದೈನಂದಿನ ಅನೇಕ ಸಮಸ್ಯೆಗಳ ಮಧ್ಯೆಯೂ ಧರ್ಮದ ಅಳವಡಿಕೆಯಾದರೆ ಆ ಜನಾಂಗದ ಪ್ರಗತಿ......ದೇಶದ ಅಭಿವೃದ್ಧಿಗೆ ಸಹಾಯಕ.

ಸರಿ ! ಧರ್ಮ ಎಂದರೇನು ? ಅದನ್ನು ತಿಳಿಯುವ

"ಧೃತಿಃ ಕ್ಷಮಾ ದಮೋ–ಸ್ತೇಯಂ ಶೌಚಮಿಂದ್ರಿಯ
ನಿಗ್ರಹಃ ।
ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮ
ಲಕ್ಷಣಂ ॥"

ಕರ್ತವ್ಯದಲ್ಲಿ ದೃಢತೆ, ಪರರ ತಪ್ಪಿಗೆ ಕ್ಷಮೆ, ತನ್ನರಿವಿನ ಹತೋಟಿ, ಇಂದ್ರಿಯಗಳ ಚಾಪಲ್ಯ ತಡೆಗಟ್ಟುವಿಕೆ, ಪರಧನ, ಪರಸತಿಯರನ್ನು ಮನಸ್ಸಿನಿಂದಲೂ ಅಪೇಕ್ಷಿಸದಿರುವುದು, ಬುದ್ಧಿವಿಕಾಸ, ವಿದ್ಯಾರ್ಜನೆ, ಸತ್ಯನಿಷ್ಠೆ, ದ್ವೇಷರಹಿತ (ಪ್ರೇಮ) ಸ್ವಭಾವ ಈ ಹತ್ತು ಗುಣಗಳು ಧರ್ಮದ ತಳಹದಿ ಎಂದು ಆರ್ಯೋಕ್ತಿ.

ಸಾಮಾನ್ಯ ಮನುಷ್ಯ ಇದನ್ನು ತನ್ನ ಬದುಕಿನಲ್ಲಿ ಅಳವಡಿಸಿಕೊಳ್ಳಲೂ ಸದಾ ಪ್ರಯತ್ನಿಸಲೇ ಬೇಕು. ಯಾರೋ ಧರ್ಮಾತ್ಮರ ಕಥೆ ಓದಿ ಅಥವ ಕೇಳಿ ತೃಪ್ತನಾದರೆ ಪೂಜ್ಯರನ್ನು ಕರೆಸಿ ಅವರಿಂದ ಹೇಳಿಸಿ ಕೇಳಿ ಧನ್ಯನಾಗಿ ಅವರಿಗೆ ಸಂಭಾವನೆ ಕೊಟ್ಟು ತೃಪ್ತನಾದರೆ ಸಾಲದು ....ತನ್ನ ಬದುಕಿನಲ್ಲಿಯೂ ಕೊಂಚ ಅಳವಡಿಸಿಕೊಳ್ಳಬೇಕು. ಸದಾಚಾರವೂ ಧರ್ಮಕ್ಕೆ ಪ್ರೇರಕ, ಆದ್ದರಿಂದ ಅದನ್ನು ನಾವು ಅಲ್ಲಗಳೆಯಬಾರದು.

"ಓ....ಮಹಾ ತಾನೆ ದೊಡ್ಡ ಭಕ್ತ ಅಂತ ದೇವಸ್ಥಾನಕ್ಕೆ ಹೋಗ್ತಾನೆ...." "ಸರಿ....ಒಂದೆರಡು ರೂಪಾಯಿ ಖರ್ಚುಮಾಡಿ ಮಹಾ ತ್ಯಾಗಶೀಲಾಂತ ತೆಂಗಿನಕಾಯಿ ಹೂ ಹಣ್ಣು ಕೊಂಡ್ಕೋತಾನೆ....ಪಾಪಾ ಇವನ ಹೂಬತ್ತಿಗೆ ದೇವರು ಕಾದಿದ್ದನಾ....?"

ಇದು ನಾಸ್ತಿಕರಿಂದ ಆಸ್ತಿಕರಿಗೆ ಸಲ್ಲುವ ಟೀಕೆ.... ದಿನಾ ದೇವಸ್ಥಾನ ಸುತ್ತು ಹೊಡೆದದ್ದು ಹೊಡೆದದ್ದೇ.... ಓ ಹ್ ! ಭಗವಂತ ಪ್ರತ್ಯಕ್ಷನಾಗಿಬಿಟ್ಟ....ಏನು ವರ ಕೊಟ್ಟ....? ಎಂಬ ಕುಚೇಷ್ಟೆಯೊಡನೆ—

"ನೋಡ್ರಿ ಭಗವಂತ ದೇವಸ್ಥಾನದಲ್ಲಿ ಮಾತ್ರ ಅಲ್ಲ ಇರೋದು ಎಲ್ಲೆಲ್ಲೂ ಇರ್ತಾನೆ....ಅದನ್ನ ತಿಳ್ಕೊಳ್ಳಿ.

ಎಂಬ ಕುತ್ಸಿತನಗೆ, ಆದರೆ ಇಂಥವರ ವಾದಕ್ಕೆ ನನ್ನ ಸವಾಲು ಇಷ್ಟೆ. ಸದಾಚಾರ ಮಾನವನನ್ನು ಧರ್ಮದ ಕಡೆಗೆ ಎಳೆದೊಯ್ದು ಬದುಕಿನಲ್ಲಿ ಯಶಸ್ಸನ್ನು ನೀಡುತ್ತದೆ.

ಓಹ್! ಧೇವಸ್ಥಾನಕ್ಕಾ....? ಎಂದು ಆಸ್ತಿಕರನ್ನು ಟೀಕಿಸಿದ ವ್ಯಕ್ತಿ ಸಿನಿಮಾಕ್ಕೋ ಅಥವಾ ಪಡಖಾನೆಗೋ ಹೋಗಿರುತ್ತಾನೆ. ಆಸ್ತಿಕ ತೆಂಗಿನಕಾಯಿ, ಕರ್ಪೂರಕ್ಕೆ ನೀಡುವ ಹಣವನ್ನು ತಾನು ಹೋಟೆಲಿನಲ್ಲಿ ಕೂತು ವಡೆ, ಕಾಫಿ ತರಿಸಿಕೊಂಡಿರುತ್ತಾನೆ.

ಬದುಕಿನಲ್ಲಿ ಒಬ್ಬ ಮನುಷ್ಯ ತಾನು ಸಂಪಾದಿಸಿದ್ದೆಲ್ಲಾ ತನಗೆ ಖರ್ಚು ಮಾಡಿಕೊಂಡು ತನ್ನ ವೈಯಕ್ತಿಕ ಸುಖಭೋಗದ ಅಮಲಿನಲ್ಲೆ ಮುಳುಗಿದ್ದರೆ ಆತ ಉತ್ಕಟ ನಾಗರೀಕನೆ ? ದೈವಭಕ್ತ ಎನ್ನುವ ಪ್ರಶ್ನೆ ಸದ್ಯಕ್ಕೆ ಬಿಟ್ಟುಬಿಡೋಣಾ.

ಆದರೆ ದೇಶಕ್ಕೆ ಒಳ್ಳೆ ನಾಗರೀಕ ಪ್ರಜೆಯಾಗಿ ಬಾಳಿ ನೈತಿಕ ಪ್ರಜ್ಞೆ ಬೆಳೆಸಿಕೊಂಡು ಮಾನವೀಯ ಮೌಲ್ಯವನ್ನು ಹೊಂದಲು ಧರ್ಮದ ಕಟ್ಟುಪಾಡುಗಳು ಮನುಷ್ಯನಿಗೆ ಬೇಕೇಬೇಕು.

ಬದುಕಿನಲ್ಲಿ ನಮ್ಮನ್ನು ಕ್ಷಣಕ್ಷಣವು ಕಾಯುವ ಒಂದು ದಿವ್ಯ ಶಕ್ತಿ ಇದೆ. ಅದೇ ದೇವರು. ಅದರ ಅವ್ಯಕ್ತತೆ ಸಾಮಾನ್ಯ ಮಾನವ ತಿಳಿಯಲಾರ. ಅನುಭವಿಸಲಾರ, ಅದಕ್ಕಾ ಮಹಾತ್ಮರು ಒಂದೊಂದು ರೂಪದೊಡನೆ ಸಗುಣಾತ್ಮಕವಾಗಿ ವರ್ಣಿಸಿದರು. ಪುರಾಣ ಪುಣ್ಯಕಥೆಗಳು ಸಿದ್ಧವಾದವು.

ದೇವಸ್ಥಾನಗಳು ಕಟ್ಟಲ್ಪಟ್ಟವು, ದೇವತಾರಾಧನೆಗಳು ಪ್ರಾರಂಭವಾದವು. ಜನರಲ್ಲಿ ಧರ್ಮಶ್ರದ್ಧೆ, ನೈತಿಕ ಭೀತಿ, ತ್ಯಾಗನಿಷ್ಠೆ ಇದರ ಮೂಲಕ ಉಂಟಾದವು. ನಮ್ಮ ಹಣ್ಣು ಕಾಯಿಗೆ ಭಗವಂತ ಕಾದಿಲ್ಲ ನಿಜ, ಆದರೆ ವೈಯಕ್ತಿಕ ಸುಖದ ಒಂದಂಶ ತೊರೆದು ಅದೇ ಹಣದಿಂದ ಭಗವಂತನಿಗೆ ಕಾಯಿ ಕರ್ಪೂರ ಕೊಂಡು ಹೋದರೆ....ಓ....ದೇವಸ್ಥಾನಕ್ಕಾ. ಎಂದು ವ್ಯಂಗವಾಗಿ ಟೀಕಿಸುವ ಹೋಟೆಲ್, ಸಿನಿಮಾ ಲೋಲನಿಗಿಂತ ಈ ಭಕ್ತ ಉತ್ತಮ ಎಂದು ನನ್ನ ಎಣಿಕೆ, ವಿಧುರನ ಒಕ್ಕುಡಿತೆ ಪಾಲ್ಕುಡಿದ, ಸುಧಾಮನ ಒಂದು ಹಿಡಿ ಅವಲಕ್ಕಿ ಸ್ವೀಕರಿಸಿದ, ಪಂಚಾಲಿ ಇತ್ತ ಒಂದಗಳು ಕೈಗೊಂಡ ಭಗವಂತ ಭಕ್ತರಿತ್ತದ್ದು ಸ್ವೀಕರಿಸಲಾರನೇ.

ದೈವ ಭಕ್ತಿ, ಧರ್ಮ ಶ್ರದ್ಧೆ, ಮಾನವನ ಮನಸ್ಸನ್ನು ಪರಿಶುದ್ಧಿಗೊಳಿಸುತ್ತದೆ. ತಾನರಿಯದ ಒಂದು ತ್ಯಾಗವನ್ನು ಮಾಡಿಸುತ್ತದೆ.

ಐಹಿಕ ಸುಖಭೋಗ ತೊರೆದು, ಬದುಕಿನಲ್ಲಿ ಕೊಂಚ ತ್ಯಾಗಮಯ ಆವರಣ ಹೊದೆಯಲು, ಇದೆಲ್ಲ ಆವಶ್ಯಕ. ಮನದಿಂದಂತೂ ಭಗವಂತನನ್ನು ಕಾಣಲೂ ನಮಗೂ ಸಾಧ್ಯವಿಲ್ಲ, ನಮ್ಮನ್ನು ಟೀಕಿಸುವ ನಾಸ್ತಿಕರಿಗೂ ಸಾಧ್ಯವಿಲ್ಲ.

ಸದಾಚಾರ, ದೈವ ಭಕ್ತಿ ತಪ್ಪಿದಾಗ ಏನಾಗುತ್ತದೆ? ಈಗೇನಾಗಿದೆ? ದೇಶದಲ್ಲಿ ಎಲ್ಲೆಲ್ಲು ನೈತಿಕ ಅಧಃ ಪತನ ಹಗಲಿಂದ ಇರುಳಿನವರಿಗೂ ದುಡಿದು ಅಲ್ಪಚೇತನದ ಆರಾಮ ಪಡೆದು, ಬಡತನದಲ್ಲಿ ತೊಳಲುತ್ತಾ ಇರುವವರದು ಒಂದು ತಂಡವಾದರೆ ಲಂಚಾ, ಭ್ರಷ್ಟಾಚಾರ, ಕಳ್ಳಸಾಗಾಣಿಕೆ, ಅಕ್ರಮ ದಾಸ್ತಾನಿನ ಶೀಘ್ರ ಸಂಪತ್ಸಾಧಕರ ತಂಡವೊಂದು ಕಡೆ.

ತಮ್ಮ ಗಳಿಕೆಯಲ್ಲಿ ಒಂದು ಪಾಲು ಸಮಾಜಕ್ಕೆ ಕೊಡಬೇಕೆಂದು ಬಸವಣ್ಣನವರು ಸಾರಿ ಹೇಳಿದರು. ಎಲ್ಲರೂ ದುಡಿಯಬೇಕು. ಯಾವುದಾದರೊಂದು ಉದ್ಯೋಗದ ಮೂಲಕ ಬಂದಗಳಿಕೆಯನ್ನೇ ಉಣ್ಣಬೇಕು. ಅದರಿಂದಲೆ ಕುಟುಂಬ ಪೋಷಿಸಬೇಕೆಂದು ಕೆಲವು ಧರ್ಮಗಳು ಹೇಳಿದವು.

ನ್ಯಾಯವಾಗಿ ದುಡಿದು ಬಂದಗಳಿಕೆಯಲ್ಲಿ, ಸಮಾಜಕ್ಕೆ ಒಂದಿಷ್ಟು ಸಲ್ಲಿಸಿ, ದೈವಕ್ಕರ್ಪಿಸಿ ಉಣ್ಣಲೆತ್ನಿಸಿದ ಆ ಜನಾಂಗ ಎಲ್ಲಿ—?

ಅನ್ಯಾಯ, ಅಕ್ರಮ ಇತ್ಯಾದಿಗಳ ಮೂಲಕ ಶೀಘ್ರವಾಗಿ ಸಂಪತ್ತನ್ನು ಕೂಡಿಸಿ ಸಮಾಜದ ಕಣ್ಣಿಗೆ ಮಣ್ಣೆರಚಿ ದೇಶದ ಪ್ರಗತಿಗೆ ಅಡ್ಡವಾಗಿರುವ ಈ ಜನಾಂಗ ಎಲ್ಲಿ...?

(26ನೇ ಪುಟ ನೋಡಿ)



# ಕಾವ್ಯವಾಚನ ಮತ್ತು ವರ್ಣೋಚ್ಚಾರಣೆ

—ಎಂ. ಜಿ. ವೆಂಕಟೇಶಯ್ಯ

Remember that you are a human being with a soul, and the divine gift of articulate speech, That your nature language is the language of Shakespeare, Milton, the Bible and don't sit there croning like a bilious pigeon.

—G. B. Shaw [Prof Higgins in My Fair Lady]

(ಆತ್ಮವುಳ್ಳ ಮಾನವನು ನೀನು ; ನಿನಗೆ ಸ್ಪಷ್ಟವಾದ ಉಚ್ಚಾರಣೆಯು ದೈವದ ಕೃಪೆಯಿಂದ ಬಂದಿದೆ ; ಎಂಬುವುಗಳನ್ನು ನೀ ನೆನಪಿನಲ್ಲಿಡು ; ನೀನಾಡುವ ಭಾಷೆ ಮಾತೃಭಾಷೆ ; ಷೇಕ್‌ಸ್ಪಿಯರ್, ಮಿಲ್ಟನ್, ಬೈಬಲ್ ಭಾಷೆ ; ಪಿತ್ತವೇರಿದ ಪಾರಿವಾಳದಂತೆ ಕೂತಲ್ಲಿ ಗೊಗ್ಗರದನಿಗೈಯದಿರು)

ಶ್ರೀ ವಾಗ್ದೇವಿಗೆ ಶಬ್ದದಿ । ನಾನಾವಿಂದ್ರಿಯದ
ವಿಷಯಮಂ ಶ್ರೋತ್ರದೊಳು ॥
ದ್ಭಾವಿಪ ನಿರ್ಮಳ ಮೂರ್ತಿಗೆ । ಈವಂದ್ಯೆಗೆ ಶಾಸ್ತ್ರ
ಮುಖದೊಳವತನಪ್ಪೆಂ ॥

—ಕೇಶಿರಾಜನ ಶಬ್ದಮಣಿದರ್ಪಣ

ಯಾವ ದೇವಿಯ ಕೃಪೆಯಿಂದ ಕಿವಿಗೆ ಕೇಳಿಸುವ ಶಬ್ದ ಮಾತ್ರದಿಂದಲೆ ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ ಇವುಗಳಿಗೆ ಸಂಬಂಧಪಟ್ಟ ರೂಪ, ಶಬ್ದ, ಗಂಧ, ರಸ, ಸ್ಪರ್ಶಾದಿಗಳು ಕೇಳುವವರಿಗೆ ಅಭಿವ್ಯಕ್ತವಾಗುವುದೋ ಆ ವಾಗ್ದೇವಿಗೆ ಲೋಕವೇ ವಂದಿಸುವ ಆ ದೇವಿಗೆ ಶಾಸ್ತ್ರ ಪ್ರಾರಂಭದಲ್ಲಿ ನಮಸ್ಕರಿಸುತ್ತೇನೆ.

ಇದರ ಅರ್ಥವನ್ನು ನಾವು ಸಂಪೂರ್ಣವಾಗಿ ಗ್ರಹಿಸಿದರೆ, ಕೇಶಿರಾಜನು ವರ್ಣ ಮತ್ತು ವರ್ಣೋಚ್ಚಾರಣೆಗೆ ಎಂಥಾ ಪ್ರಮುಖ ಸ್ಥಾನವನ್ನು ಕೊಟ್ಟಿದ್ದಾನೆ ಎಂಬುದು ನಮಗೆ ಗೋಚರವಾಗುತ್ತದೆ.

ಮಾನವನಿಗೂ ಮೃಗಗಳಿಗೂ ಇರುವ ದೊಡ್ಡ ವ್ಯತ್ಯಾಸ ವರ್ಣೋಚ್ಚಾರಣೆಯಲ್ಲಿಯೇ ಗಮಕಿ (ಕನ್ನಡ ಕಾವ್ಯವಾಚನ ಮಾಡುವವ) ಯು ವರ್ಣೋಚ್ಚಾರಣೆಗೆ ಸಾಕಷ್ಟು ಗಮನಕೊಡದಿದ್ದಲ್ಲಿ ಆಗುವ ಪ್ರಮಾದವನ್ನು ಸೂಚಿಸಲು ನಾನು ಕೇಳಿದ ಒಂದು ಪದ್ಯವನ್ನು ನನ್ನ ಕಿವಿಗೆ ಬಿದ್ದಂತೆಯೆ ನಿರೂಪಿಸಿರುತ್ತೇನೆ.

ಕೆಲ್ದಾವಲೆ ವಲ್ಡಡುಲ್ಡಹಾ । •
ನಲ್ದದದಿ ನೋಗಲಿಸುವಳಿಗಳೆನಿಸು ಕಲಮಿವಲಿಂ ॥
ದೊಲ್ದಿದಿದ ಕುಲುಲೆಂದೊಲ್ವಳ್ ।
ಸಲ್ದಸಿದಳ್ ಚೆನ್ನ ಪೂಬನ ಬಲೆಯ ಕುಲುಳೊಳ್ ॥

(—ಜಗನ್ನಾಥ ವಿಜಯ X ೧೨೪)

ಪದ್ಯವಿರುವುದು ಹೀಗೆ :—

ಕೆಂದಾವರೆ ವಂಡುಂಡಾ ।
ನಂದದಿನೋಕರಿಸುವಳಿಗಳೆನಿಸುಗುಮಿವರಿಂ ॥
ದೊಂದಿದ ಕುರುಳಿಂ ದೊರ್ವಳ್ ।
ಸಂದಿಸಿದಳ್ ಚೆನ್ನಪೂವನ ಬಲೆಯ ಕುರುಳೊಳ್ ॥

ಹಾಡಿದ ರಾಗ ಸಮಂಜಸವಾಗಿತ್ತು, ಹಾಡಿದಾತನು ಅದ್ವಿತೀಯ ಪಂಡಿತ ; ಕನ್ನಡ ಸಂಸ್ಕೃತಗಳೆರಡನ್ನೂ ಬಲ್ಲವನು. ಆದರೆ ಗಮಕದ ದೃಷ್ಟಿಯಿಂದ ಈ ವಾಚನ ಮೇಲಿನ ಮಟ್ಟದ್ದಲ್ಲ, ಶ್ರೋತೃಗಳಿಗೆ ಕಾವ್ಯದ ಭಾಷೆಯ ವರ್ಣ ತಿಳಿಯಾಗಿ ನಿಷ್ಕರ್ಷೆಯಾಗಿ ಸ್ಪಷ್ಟವಾಗಿ

ಕೇಳಿಸಬೇಕು. ರು-ಕಾರ, ರಕಾರ[1] ಗಳು ಒಂದಾಗಬಹುದೇನೋ ; ಆದರೆ ಅನುಸ್ವಾರ, ಲಕಾರ, ರಕಾರ ಇವುಗಳ ಉಚ್ಚಾರಣೆ ಒಂದೇ ಆಗುವುದು ಸಾಧುವಲ್ಲ.[2] ಹೀಗೆ ವಾಚನ ಮಾಡುವುದರಿಂದ ಪ್ರಬಂಧದ ಸೌಕುಮಾರ್ಯವನ್ನು ಕೊಂದ ದೋಷವು ಗಮಕಿಗೆ ಸುತ್ತಿಕೊಳ್ಳುತ್ತದೆ.

—೨—

ವರ್ಣೋಚ್ಚಾರಣೆಯ ವಿಚಾರವಾಗಿ ಗಮಕಿಯು ಕೆಲವು ಅಂಶಗಳನ್ನು ನೆನಪಿನಲ್ಲಿಟ್ಟುಕೊಳ್ಳುವುದು ಶ್ರೇಯಸ್ಕರ.

ವರ್ಣೋತ್ಪತ್ತಿಯು ನಾಭಿಕಮಲದಲ್ಲಿ ಎಂದು ಶಬ್ದಮಣಿದರ್ಪಣದಲ್ಲಿ ಹೇಳಲಾಗಿದೆ [I.2] ಉಚ್ಚಾರಣೆಯು ಶುದ್ಧವಾಗಿ ಆಗಬೇಕಾದರೆ, ಗಮಕಿಯು ನಾಭಿ ಮೂಲದಿಂದಲೆ ವರ್ಣದ ಉಚ್ಚಾರಣೆ ಹೊರಡುವಂತೆ ಪ್ರಯತ್ನ ಮಾಡಬೇಕು ; ಕೇವಲ ತುಟಿಯಿಂದಲ್ಲ [ನೋಡಿ, ಶುದ್ಧಾಕ್ಷರಂ ಕನ್ನಡನುಡಿ Oct. 68]

ವರ್ಣೋಚ್ಚಾರಣೆಯಲ್ಲಿ ಸಾಮಾನ್ಯವಾಗಿ ಈ ಐದು (5) ಅಂಶಗಳನ್ನು ನಾವು ಗುರುತಿಸಬಹುದು.

1. ನಿನದ--ಗುಡುಗ ಇತ್ಯಾದಿಗಳಂತಿರುವ ಖಾಲಿಶಬ್ದ
2. ಸ್ವರ—ಸಂಗೀತಗಾರರು ಇದನ್ನು ಧಾತು ಎಂದು ಗುರುತಿಸುತ್ತಾರೆ.
3. ವರ್ಣ--ಇದು ಜನರು ಆಡುವ ಭಾಷೆಗೆ ಸಂಬಂಧಪಟ್ಟ [Phoneme] ಕಾರ, ಕನ್ನಡದಲ್ಲಿ ರಕಾರ ಚ-ಕಾರಗಳಂತೆ.
4. ಅನುಸ್ವಾರ (೦) ದ ಅಚ್ಚರೂಪ—ಬಾಯಿಮುಚ್ಚಿಕೊಂಡು ಮ್ ಎಂದಂತೆ.
5. ಅನುಸ್ವಾರಕ್ಕಿಂತಲೂ ಸೂಕ್ಷ್ಮವಾದ ಶುದ್ಧನಾದ (ಅಂತರ್ನಾದ) ಇದನ್ನು ತತ್ವಜ್ಞರು ಅನಾಹತನಾದ ಎಂದಿದ್ದಾರೆ.

ಇದರಲ್ಲಿ ಗಮಕಿಯು ಅತಿ ಜಾಗರೂಕತೆಯಿಂದ ಅಭ್ಯಾಸ ಮಾಡಬೇಕಾದವು (3) ವರ್ಣ ಮತ್ತು (4) ಅನುಸ್ವಾರ. ಹಿಂದೆ ಕೊಟ್ಟಿರುವ ಉದಾಹರಣೆಯಲ್ಲಿ ಗಮಕಿಯು ಈ ಅಭ್ಯಾಸವನ್ನು ಮಾಡದೇ ಇರುವುದು ಸ್ಪಷ್ಟ.

—೩—

ವರ್ಣದಲ್ಲಿ ಎರಡು ಮುಖ್ಯಾಂಶಗಳಿವೆ–1] ನಾಮ ಮತ್ತು 2] ರೂಪ. ನಾಮವೆಂದರೆ ವರ್ಣಶಬ್ದ ; ರೂಪವೆಂದರೆ ಅರ್ಥವನ್ನು ತಿಳಿಸುವ ಕಿರಣ ವರ್ಣೋಚ್ಚಾರಣೆಯಲ್ಲಿ ರೂಪವು ಬದಲಾಗಬಾರದು [ಉದಾ. ಸರ, ಶರ]

ವರ್ಣಗಳಿಗೆ ಗುಣವುಂಟು–ಕೆಲವು ಮೃದು; ಕೆಲವು ಕರ್ಕಶ. ಹೀಗೆ ವರ್ಣಗಳನ್ನು ಶುದ್ಧವಾಗಿ ಉಚ್ಚರಿಸದಿದ್ದರೆ ಇವು ಕೆಡುತ್ತವೆ.

ಮತ್ತೊಂದು ವಿಚಾರವನ್ನು ನಾವಿಲ್ಲಿ ಸೂಕ್ಷ್ಮವಾಗಿ ವಿಚಾರಮಾಡಬೇಕು. ಪ್ರತಿ ವರ್ಣಕ್ಕೂ ಶಕ್ತಿಯುಂಟು; ಈ ಶಕ್ತಿಯಿಂದಲೆ ನಮಗೆ ಪದದ ಅರ್ಥವು ಗೋಚರವಾಗುವುದು. ಗೋಚರ ಮಾತ್ರವೇ ಅಲ್ಲ ಗೋಚರವಾಗಿ ಆ ಅರ್ಥ ಹರಡುತ್ತದೆ. ಅನೇಕ ಕವಿಗಳು ಈ ವರ್ಣ ಶಕ್ತಿಯನ್ನು ಉಪಯೋಗಿಸಿಕೊಂಡಿರುತ್ತಾರೆ. ಅರ್ಥ ಹರಡುವ ಕಾರ್ಯವನ್ನು ನಾವು ವಿಪಾಕ ಎಂಬ ಪದದಿಂದ ಗುರ್ತಿಸೋಣ. ಆಗ ನಮಗೆ ಗೋಚರವಾಗುವ ಅಂಶ ಹೀಗಿದೆ :—

ವರ್ಣದ ಉಚ್ಚಾರಣೆ. ಗುಣ, ಶಕ್ತಿಗಳನ್ನು ನಾವು ಬದಲಾಯಿಸಲಾರೆವು ; ಆದರೆ ಬೇರೆ ಬೇರೆ ವರ್ಣ ಸಂಯೋಗದಿಂದ ವಿಪಾಕಗಳನ್ನು ಕಲ್ಪಿಸುವುದು ಸಾಧ್ಯ. ಗಮಕಿಯು ವಾಚನ ಮಾಡುವಾಗ ಈ ವಿಪಾಕವನ್ನು ಶ್ರೋತೃಗಳಿಗೆ ತೋರಿಸುವಂತೆ ಮಾಡಬೇಕು.

ಇನ್ನು ಇವುಗಳು ಎಲ್ಲ ಗಮಕಿಗಳಿಗೂ ತಿಳಿದಿರುವ ವಿಚಾರಗಳು :—

1. ಹ್ರಸ್ವ, ದೀರ್ಘ ; ಅಲ್ಪಪ್ರಾಣ, ಮಹಾಪ್ರಾಣ ; ಒತ್ತಾಕ್ಷರ, ಸಂಯುಕ್ತಾಕ್ಷರ ; ಬಿಂದು, ವಿಸರ್ಗ ; ಇವುಗಳನ್ನು ಪರಿಶೀಲಿಸಿ ವಾಚನ ಮಾಡಬೇಕು.

1. ಬಂಡಾರ 2. ೦, ಲ, ರ.



2. ಛಂದಸ್ಸಿನ ವಿಚಾರವನ್ನು ತಿಳಿದುಕೊಂಡು, ಪ್ರಾಸಕ್ಕಾಗಿ ಉಪಯೋಗಿಸಿರುವ ವರ್ಣ, ಯಮಕ, ಇವನ್ನು ಗುರುತಿಸಿ ಪದ್ಯದಲ್ಲಿ ರಚನೆಯಾಗಿರುವ ಉದಾರತೆ (ಅಲಂಕಾರ)ಯನ್ನೂ ಪರಿಶೀಲಿಸಿ ವಾಚನ ಮಾಡಬೇಕು.

3. ಕಾವ್ಯದಲ್ಲಿ ಅಡಗಿರುವ ವಾಚ್ಯಚಿತ್ರಂ, ಶಬ್ದಚಿತ್ರಂ [ನೋಡಿ, ಅಪ್ರತಿಮ ವೀರ ಚರಿತಂ I, 0] ಇವುಗಳು ಶ್ರೋತೃಗಳಿಗೆ ಸುಲಭವಾಗಿ ವ್ಯಕ್ತವಾಗುವಂತೆ ಗಮಕಿಯು ವರ್ಣೋಚ್ಚಾರಣೆ ಮಾಡತಕ್ಕದ್ದು.

4. ವರ್ಣ ಶಬ್ದದಿಂದ ಒಳ ಕಿವಿಯ ಪೆರಿಲಿಂಫ್ [Perilymph]ಗೆ ಸೇರಿದ ಅಲೆಗಳು ಎಂಡೋಲಿಂಫ್ [Endolymph]ಗೆ ಹೋಗಿ ಅಲ್ಲಿಂದ ಮುಂದೆ ಶಿರದ ನರಗಳಿಗೆ ಸ್ಪಂದನೆಯನ್ನುಂಟುಮಾಡುತ್ತವೆ. ಮನಸ್ಸು ಈ ಸ್ಪಂದನೆಗೆ ಅರ್ಥವನ್ನು ಕಲ್ಪಿಸುತ್ತದೆ. ಕಲ್ಪಿಸುವ ಕಾಲದಲ್ಲಿ ಕವಲೊಡೆದು ಭಾವವು ವ್ಯಕ್ತವಾಗುತ್ತವೆ; ಈ ಭಾವವೇ ರಸವಾಗಿ ಪರಿಣಮಿಸುತ್ತದೆ. ಈ ರೀತಿಯಾಗಿ ವಾಚನ ಶಬ್ದ ಪ್ರಕ್ರಿಯೆಯು ರಸವಾಗಿ ಪರಿಣಮಿಸಬೇಕು.

—೪—

ವರ್ಣಕ್ಕೂ ವರ್ಣಕ್ಕೂ. ಪದಕ್ಕೂ ಪದಕ್ಕೂ ಸಾಕಷ್ಟು ವಿರಾಮವನ್ನು ಕಲ್ಪಿಸದೆ, ಅತಿ ತ್ವರೆಯಿಂದ ವರ್ಣೋಚ್ಚಾರಣೆಯನ್ನು ಗಮಕಿಯು ಮಾಡಿದರೆ ಶ್ರೋತೃಗಳಿಗೆ ಗಮಕಿಯ ಧ್ವನಿ ಮಾತ್ರ ಕೇಳಿಸಬಹುದಾಗಲಿ, ಅರ್ಥ ಶೂನ್ಯವಾಗುತ್ತದೆ ಆದ್ದರಿಂದ ಸ್ಪಷ್ಟವಾದ ಉಚ್ಚಾರಣೆಯ ಜೊತೆಗೆ ಅದರ ಕಾಲ ಪ್ರಮಾಣ [Speed]ವನ್ನು ಗಮಕಿಯು ತನ್ನ ಗಮನಕ್ಕೆ ತಂದುಕೊಳ್ಳಬೇಕು.

ಉಚ್ಚಾರಣೆಯ ಪ್ರಮಾಣ ಕಾಲವನ್ನು ಕಾಲವೆಂದು ಸೂಚಿಸಿದರೆ, ವಾಚನ ಕ್ರಮದಲ್ಲಿ ನಾವು ನಾಲ್ಕು ಕಾಲಗಳನ್ನು ವಿಂಗಡಿಸಬಹುದು—

1. ಅತಿ ನಿದಾನಕಾಲ (ಅತಿ ವಿಳಂಬ)
2. ನಿಧಾನಕಾಲ (ವಿಲಂಬ)
3. ಮಧ್ಯಮಕಾಲ
4. ದುರಿತ (ಬೇಗಬೇಗ)—ಎಂದರೆ ಮೂರನೆಯಕಾಲವೆನ್ನಬಹುದು ಉಚ್ಚಾರಣೆಯು ಸಾಮಾನ್ಯವಾಗಿ [3] ಮಧ್ಯಮಕಾಲದಲ್ಲಿಯೆ ಬರುತ್ತದೆ ಈ ವಿಚಾರದಲ್ಲಿ ಗಮಕಿಯು ತನಗೆ ಅನುಕೂಲವಾದ ಕಾಲ ಪ್ರಮಾಣವನ್ನು ಉಪಯೋಗಿಸಬೇಕು.

ಕನ್ನಡ ಮಾನವನ ಭಾಷೆ ; ಕನ್ನಡ ವರ್ಣಗಳು ಮಾನವನ ಶಾರೀರದಿಂದ ಬಂದಂತೆ ಶ್ರೋತೃಗಳಿಗೆ ಕೇಳಿಸಬೇಕು. ಪಂಪ, ರನ್ನ, ಬಸವೇಶ್ವರ, ಕುಮಾರವ್ಯಾಸ ಈ ಕವಿ ಪುಂಗರ ಭಾಷೆಯಾದುದರಿಂದ ವರ್ಣೋಚ್ಚಾರಣೆಯಲ್ಲಿ ಗಾಂಭೀರ್ಯವಿರಬೇಕು. ಕನ್ನಡ ಕಾವ್ಯವಚನದಿಂದ ತಾನು ಪುನೀತನಾಗಬೇಕೆಂಬ ಆಸೆ ಗಮಕಿಯ ಮನಸ್ಸಿನಲ್ಲಿ ಸತತವೂ ಇರಬೇಕು. —

(24ನೇ ಪುಟದಿಂದ)

ಜನತೆಯಲ್ಲಿ ಮೊದಲು ಧಾರ್ಮಿಕ ಜಾಗೃತಿಯುಂಟಾಗಬೇಕು. ಆಗ ಅನ್ಯಾಯ ಮಾಡಲು, ಅಧರ್ಮದಲ್ಲಿ ತೊಡಗಲು ಅವನ ಆತ್ಮ ತಾನೇ ಹೆದರುತ್ತದೆ. ಧರ್ಮ ಜಾಗೃತಿಯುಂಟಾಗಲು ಸದಾಚಾರಗಳು ಅವಶ್ಯಕ. ಸದಾಚಾರ, ಸದ್ವರ್ತನೆ ತನ್ನಿಂದ ತಾನೆ ಮೂಡಿ ಬರುವುದಿಲ್ಲ. ಅದಕ್ಕೆ ಸತತವಾಗಿ ಧರ್ಮ ಶ್ರವಣ ಕಿವಿ ಮೇಲೆ ಬೀಳುತ್ತಿರಬೇಕು, ಹಿರಿಯರ, ಗುರುಗಳ ಉಪದೇಶ ಬೇಕು. ನಮ್ಮನ್ನು ಟೀಕಿಸಿ ತೃಪ್ತರಾಗುವ ನಾಸ್ತಿಕರು ನೈತಿಕವಾಗಿ ನಮಗಿಂತ ತುಂಬಾ ಕೆಳಮಟ್ಟದಲ್ಲಿದ್ದಾರೆಂಬ ಅರಿವು ಬೇಕು. —

---

**ಲೋಕದಲ್ಲಿ ಯಾರು ಬಡವನು ?**

**ತನ್ನ ಆದಾಯಕ್ಕಿಂತ ಹೆಚ್ಚು ಖರ್ಚು ಮಾಡುವವನು.**

---

(8 ನೇ ಪುಟದಿಂದ)

ಜರುಗಿದವು. ಕೊನೆಯಲ್ಲಿ ಶ್ರೀ ಶ್ರೀಗಳವರು ವಿಶ್ವ ಬಂಧು ಮಾನವತಾವಾದಿ ಬಸವಣ್ಣನವರು ಲೋಕಕಲ್ಯಾಣಕ್ಕೆ ಹಾಕಿದ ಮಹಾಮಂತ್ರ "ಕಾಯಕವೇ ಕೈಲಾಸ" ಎನ್ನುವ ವಿಚಾರದಲ್ಲಿ ಹಲವು ದೃಷ್ಟಾಂತಗಳೊಂದಿಗೆ ಸುಮಾರು ಎಂಟುಘಂಟೆಗಳ ಕಾಲ ಮಾಡಿದ ಅನುಗ್ರಹ ಭಾಷಣ ಎಲ್ಲರ ಮನಮುಟ್ಟಿತ್ತು. ಆ ಸಭೆಯ ಮೌನ ಆಭಾವ ವನ್ನರುಹಿತ್ತು.

ಸಂಜೆ ಭಕ್ತರ ಕೋರಿಕೆಯಂತೆ ಶ್ರೀ ಶ್ರೀಗಳವರ ಪಾದಪೂಜೆ ಪ್ರಸಾದದನಂತರ ರಾತ್ರಿ 10 ಘಂಟೆಗೆ ಸರಿಯಾಗಿ ಶ್ರೀ ಸಿದ್ಧಗಂಗಾಕ್ಷೇತ್ರದ ಶ್ರೀ ಸಿದ್ಧಲಿಂಗೇಶ್ವರ ಸಂಗೀತ ನಾಟಕ ಮಂಡಲಿಯುವರಿಂದ ಶ್ರೀ ಜಗಜ್ಯೋತಿ ಬಸವೇಶ್ವರ ನಾಟಕ ಅಭಿನಯಿಸಲ್ಪಟ್ಟಿತು. ನಾಟಕ ಮುಗಿದಾಗ ಮೂಡಲ ಮೂಗಿಲಿ ಮುಸ್ತಂಚಿನಲ್ಲಿ ರವಿ ಮೂಡುವುದರಲ್ಲಿದ್ದನು. ಪತಿತೋದ್ಧಾರಕ ಬಸವಣ್ಣನ ಮೇಲೆ ಆ ಹೊತ್ತಿಗಾಗಲೇ ನೆರೆದಿದ್ದ ಪ್ರೇಕ್ಷಕರ ಹೃನ್ಮನಗಳಲ್ಲಿ ಭಕ್ತಿಭಾವವೂ ಮೂಡಿತ್ತು. ಒಟ್ಟಿನಲ್ಲಿ ಇಡೀ ಹಗಲು ರಾತ್ರಿ ಶ್ರೀ ಬಸವೇಶ್ವರರ ದಿವ್ಯನಾಮಸ್ಮರಣೆ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರ ಕೃಪಾದೃಷ್ಟಿಯಿಂದ ಆ ಪ್ರದೇಶದ ಜನತೆಗೆ ಒದಗಿತ್ತು.

ದಿನಾಂಕ 9-5-79 ಶನಿವಾರ ಬೆಂಗಳೂರು ಜಿಲ್ಲೆ ಮಾಗಡಿ ತಾಲ್ಲೂಕು ಕಂಚುಗಲ್ ಬಂಡೇ ಮಠದಲ್ಲಿ ಸಮಾರಂಭವು ಜರುಗಿತು. ಪ್ರಾತಃಕಾಲ 8-30 ರಿಂದ 11-30ರ ವರೆಗೆ ಶ್ರೀ ಬಸವಣ್ಣನವರ ಬಗೆಗೆ ಪ್ರವಚನ ಮತ್ತು ಭಾಷಣಗಳು. 12 ಘಂಟೆಗೆ ಶ್ರೀ ಶ್ರೀಗಳವರ ಪಾದಪೂಜೆ ಮತ್ತು ಪ್ರಸಾದ ವಿನಿಯೋಗ. ಸಾಯಂಕಾಲ 3 ರಿಂದ 6 ಘಂಟೆಯುವರೆಗೆ ಶಿವಾನುಭವ ಮಂಟಪದಲ್ಲಿ ವಿದ್ವಾಂಸರ ಭಾಷಣಗಳು ಜರುಗಿದವು. ಇಲ್ಲಿನ ಶಿವಾನುಭವ ಮಂಟಪದ ವಿಶೇಷತೆಯೇನೆಂದರೆ ಸುಮಾರು 15 ಜನ ಮಠಾಧಿಪತಿಗಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದು. ಕೆಲವು ಹರಗುರು ಚರಮೂರ್ತಿಗಳೂ ಸಭಿಕರಿಗೆ ಶರಣ ತತ್ತ್ವವನ್ನು ಪರಿಚಯು ಮಾಡಿಕೊಟ್ಟರು. ಶ್ರೀ ಶ್ರೀಗಳವರು ಮುಕ್ತಾಯದಲ್ಲಿ ಲೋಕ ಕಲ್ಯಾಣದ ತಾರಕ ಶಕ್ತಿಯಾದ ಕಾಯಕ ತತ್ವವನ್ನು ಸರಳ ಶೈಲಿಯಲ್ಲಿ ಪರಿಚಯ ಮಾಡಿಕೊಟ್ಟರು. ರಾತ್ರಿ ಶ್ರೀ ಶ್ರೀಗಳವರ ಪೂಜೆ ಪ್ರಸಾದನಂತರ 10 ಘಂಟೆಗೆ ಶ್ರೀ ಸಿದ್ಧಲಿಂಗೇಶ್ವರ ನಾಟಕ ಮಂಡಲಿಯುವರಿಂದ ಶ್ರೀ ಜಗಜ್ಯೋತಿ ಬಸವೇಶ್ವರ ಎಂಬ ನಾಟಕವು ಅತ್ಯಂತ ಯಶಸ್ವಿಯಾಗಿ ಅಭಿನಯಿಸಲ್ಪಟ್ಟಿತು. ಪ್ರಸಾದ ವ್ಯವಸ್ಥೆ, ಮಂಟಪ ಮುಂತಾದ ಅನುಕೂಲಗಳನ್ನು ಬಂಡೇ ಮಠದ ಶ್ರೀ ಶ್ರೀಗಳವರು ವ್ಯವಸ್ಥೆ ಮಾಡಿದ್ದರು.

ದಿನಾಂಕ 24-5-79 ಗುರುವಾರ ತುಮಕೂರು ತಾಲ್ಲೂಕ್ ಮೇಳೇಹಳ್ಳಿ ಗ್ರಾಮದಲ್ಲಿಯೂ ಬೆಳಗಿನಿಂದ ಸಂಜೆಯುವರೆವಿಗೂ ಮಾಮೂಲಿನಂತೆ ಪ್ರವಚನ, ವಚನ, ಗಾಯನ, ವಿದ್ವಾಂಸರ ಭಾಷಣಗಳು ಶ್ರೀ ಬಸವೇಶ್ವರರ ಬಗೆಗೆ "ಜ್ಞಾನ ಮಂಟಪ"ದಲ್ಲಿ ಜರುಗಿದವು. ಮಧ್ಯಾಹ್ನ ಶ್ರೀ ಶ್ರೀಗಳವರ ಪಾದಪೂಜೆಯ ನಂತರ ಸಮಾರಂಭ ಭಾಗವಹಿಸಿದ್ದ ಭಕ್ತಾದಿಗಳಿಗೂ ಪ್ರಸಾದ ವ್ಯವಸ್ಥೆಯನ್ನು ಮೇಳೇಹಳ್ಳಿ ಗ್ರಾಮದವರು ವ್ಯವಸ್ಥೆಗೊಳಿಸಿದ್ದರು. ಸಾಯಂಕಾಲ ಹಲವು ವಿದ್ವಾಂಸರ ಭಾಷಣಗಳು ನೆರವೇರಿದುವು. ಶ್ರೀ ಶ್ರೀಗಳವರು ಆಯ್ದಕ್ಕಿ ಮಾರಯ್ಯ, ಮೇದರ ಕೇತಯ್ಯ ಹಾಗೂ ಸುಲಿಯ ಚಂದಯ್ಯ ಮೊದಲಾದವರು ಕಾಯಕಕ್ಕೆ ಕೊಟ್ಟ ಮಹತ್ವ ವಿಚಾರವನ್ನು ತಮ್ಮ ಆಶೀರ್ವಚನದಲ್ಲಿ ದಯಪಾಲಿಸಿದರು. ರಾತ್ರಿ ಪ್ರಸಾದನಂತರ 10 ಘಂಟೆಗೆ ಶ್ರೀ ಬಸವೇಶ್ವರ ನಾಟಕವನ್ನು ಶ್ರೀ ಸಿದ್ಧಲಿಂಗೇಶ್ವರ ನಾಟಕ ಮಂಡಳಿಯುವರು ಅಭಿನಯಿಸಿದರು. ಈ ಯಶಸ್ವೀ ನಾಟಕ ಪ್ರದರ್ಶನವು ಜನಮನದಲ್ಲಿ ನೆಲೆಯಾಯಿತು. ಆ ಪ್ರಾಂತ್ಯದ ಸುತ್ತಲಿನ ಗ್ರಾಮಸ್ಥರ ಆನಂದ ಸಂತೋಷಗಳಿಗೆ ಮಿತಿಯೇ ಇಲ್ಲದಂತಾಯಿತು. ಒಟ್ಟಿನಲ್ಲಿ ಶ್ರೀ ಶ್ರೀಗಳವರು ಹಾಕಿಕೊಂಡ ಈ ಗ್ರಾಮಾಂತರ ಬಸವ ಜಯಂತ್ಯುತ್ಸವ ಸಮಾರಂಭ ಅತ್ಯಂತ ಫಲಪ್ರದವಾಗಿ ಹಾಗೂ ಪರಿಣಾಮಕಾರಿಯಾಗಿ ನಡೆಯಿತು ಎಂಬುದರಲ್ಲಿ ಸಂಶಯವೇನೂ ಉಳಿದಿಲ್ಲ.

[ಈ ಮೇಲಿನ ಮೂರು ಕಡೆಯಲ್ಲಿಯೂ ಪ್ರಸಾದ ವ್ಯವಸ್ಥೆಯನ್ನುಳಿದು ಉಳಿದ ವ್ಯವಸ್ಥೆಗಳು ಶ್ರೀ ಶ್ರೀಗಳವರ ಕೃಪಾಶೀರ್ವಾದದಿಂದಲೇ ಜರುಗಿದುವು.]





ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.

...E PAYMENT LICENCE NO.3
...papers for India under No. 17139/69
Reg No. KRN Q-9
...thly, Siddaganga Mutt-572131, Tumkur Dist.

# ಸಿದ್ಧಗಂಗಾ



ನನ್ನ ದೇಶಕ್ಕೆ ಈ ವಿಷಯವನ್ನು ಸ್ಪಷ್ಟವಾಗಿ ತಿಳಿಸಬಯಸುತ್ತೇನೆ. ರಾಜಕೀಯವು ಧರ್ಮದಿಂದ ಬಾಹಿರವಲ್ಲ. ಧರ್ಮವೆಂದರೆ ಕುರುಡು ನಂಬಿಕೆಯ ಧರ್ಮವಲ್ಲ. ಸಹಿಷ್ಣುತೆಯ ಧರ್ಮ. ಆದುದರಿಂದ ನೀತಿ ರಹಿತ ರಾಜಕೀಯವನ್ನು ತ್ಯಜಿಸಬೇಕು. ಇದನ್ನು ಕೇಳಿ ಕೆಲವರು ಇದು ಹೇಗೆ ಸಾಧ್ಯ ? ಸಾರ್ವಜನಿಕರ ಕ್ಷೇತ್ರದಿಂದ ವಿರಮಿಸಬೇಕಷ್ಟೇ ಎನ್ನುವವರಿದ್ದಾರೆ. ಯಾರ ಭಾವನೆ ಹೇಗಾದರೂ ಇರಲಿ. ನಾನಂತೂ ಧರ್ಮವನ್ನು ತ್ಯಜಿಸಲಾರೆ; ಸಮಾಜದಲ್ಲಿದ್ದು ಅದರ ನ್ಯೂನತೆಗಳಿಗೆ ಹೊರತಾಗಿ ಬಾಳಬೇಕೆಂದು ಇಚ್ಛಿಸುತ್ತೇನೆ. 'ಈಸಬೇಕು, ಇದ್ದು ಜೈಸಬೇಕು', ಇದು ನನ್ನ ತತ್ವ

—ಸ್ವಾತಂತ್ರ್ಯಕರ್ತ ಗಾಂಧೀಜಿ

ಆಗಸ್ಟ್, ೧೯೭೯